# ಪಂಡಿತರಾಜ ಜಗನ್ನಾಥಕೃತ
# ಗಂಗಾಲಹರಿ



ಅನುವಾದ :

ಪಂ. ಪಂಢರೀನಾಥಾಚಾರ್ಯ ಗಲಗಲಿ

ಮೊದಲ ಮುದ್ರಣ : 1957

ಮುದ್ರಣ : 2014

ಪ್ರಕಾಶಕರು : ಪಂ. ಪಂಢರೀನಾಥಾಚಾರ್ಯ ಗಲಗಲಿ,
ಗಲಗಲಿ ಪ್ರಕಾಶನ, ಹುಬ್ಬಳ್ಳಿ


ಪ್ರತಿಗಳು ಸಿಗುವ ಸ್ಥಳ : ಪಂ. ಗುರುಪ್ರಸಾದಾಚಾರ್ಯ
ಪಂ. ಬದರಿನಾಥಾಚಾರ್ಯ
ಪೂರ್ಣಪ್ರಜ್ಞ, ವಿದ್ಯಾಪೀಠ ಬೆಂಗಳೂರು
ಫೋನ ನಂ. 0836- 26797143

**ಮಾಧವ ಗಲಗಲಿ**
# 159,1ನೇ ಮುಖ್ಯ ರಸ್ತೆ, 4ನೇ ಅಡ್ಡ ರಸ್ತೆ,
ರಾಮಾಂಜನೇಯ ನಗರ
ಕೆ.ಎಸ್.ಆರ್.ಟಿ.ಸಿ. ಲೇ ಔಟ್
ಬೆಂಗಳೂರು-560061

**ಪಂ. ಮುರಳಿಧರಾಚಾರ್ಯ ಗಲಗಲಿ**
7-5-311 ಜವಾಹರ ನಗರ
ರಾಯಚೂರು ದೂ : 08532-240578

**ವೆಂಕಟೇಶ ಮನ್ನಾರಿ**
ರಾಘವೇಂದ್ರ ಅಪಾರ್ಟಮೆಂಟ್,ಅಪೂರ್ವ
ನಗರ, ಗೋಕುಲ ರೋಡ, ಹುಬ್ಬಳ್ಳಿ.
ದೂರವಾಣಿ : 9035405094

**ಡಾ॥ ವೆಂಕಟನರಸಿಂಹಾಚಾರ್ಯ ಜೋಶಿ**
ಗುಡೇಬೆಲ್ಲೂರ, ಧಾರವಾಡ
ದೂರವಾಣಿ- 9880429716

**ಗೋಪಿನಾಥ ಗಲಗಲಿ USA**
gopeenath@gmail.com

ಬೆಲೆ : 100/- ರೂಪಾಯಿಗಳು

ಮುದ್ರಕರು : ಮಿಹಿರ್ ಗ್ರಾಫಿಕ್ಸ್
ಶಿವಾಜಿ ರೋಡ, ಧಾರವಾಡ-580001,

# ಪರಿವಿಡಿ

ವಿಷಯ

ಪುಟ ಸಂಖ್ಯೆ

# ಮುನ್ನುಡಿ

ನನ್ನ ತರುಣ ಮಿತ್ರರಾದ ಶ್ರೀ ಪಂಢರೀನಾಥಾಚಾರ್ಯ ಗಲಗಲಿಯವರ ಕನ್ನಡ ಗಂಗಾಲಹರಿಗೆ ಈ ಮುನ್ನುಡಿಯನ್ನು ಅವರ ಇಚ್ಛೆಯಂತೆ ಬರೆಯುತ್ತಿದ್ದರೂ. ಸ್ವಸಂತೋಷಕ್ಕಾಗಿ ಬರೆಯುತ್ತಿದ್ದೇನೆ. ತನ್ನ ನಾದ ಮಾಧುರ್ಯದಿಂದ ಕಾವ್ಯದತ್ತ ಮನಸೆಳೆದವನು ಭಾಮಿನೀ ವಿಲಾಸ ಮತ್ತು ಪೀಯೂಷಲಹರಿಕಾರನಾದ ಜಗನ್ನಾಥ ಪಂಡಿತನು. ತದನಂತರದಲ್ಲಿ ಗೀತಗೋವಿಂದ ಮತ್ತು ಸೌಂದರ್ಯಲಹರಿಗಳು ನನ್ನ ಹೃದಯದಲ್ಲಿ ಮನೆ ಮಾಡಿದವು. ಅಮೃತ ಲಹರಿಯಲ್ಲಿ ಯಮುನೆಯನ್ನೂ, ಕರುಣಾಲಹರಿಯಲ್ಲಿ ವಿಷ್ಣುವನ್ನೂ ಸುಧಾಲಹರಿಯಲ್ಲಿ ಸೂರ್ಯನನ್ನೂ ಲಕ್ಷ್ಮೀ ಲಹರಿಯಲ್ಲಿ ಲಕ್ಷ್ಮೀಯನ್ನೂ ಸ್ತುತಿಸಿದ ಕವಿಯೇ ಪಿಯೂಷ ಲಹರಿಯಲ್ಲಿ ಗಂಗೆಯನ್ನು ವರ್ಣಿಸಿದ್ದಾನೆ. ಅಖ್ಯಾಯಿಕಾ ಬಲದಿಂದಲೂ, ಧಾರ್ಮಿಕ ಪಾರ್ಶ್ವ ಭೂಮಿಯಿಂದಲೂ, ಗಂಗೆಯ ಮಹಾತ್ಮ್ಯದಿಂದಲೂ, ಗಂಗಾಸ್ತವರೂಪವಾದ ಪಿಯೂಷಲಹರಿಯು ಗಂಗಾಲಹರಿಯಾಗಿ ಪರಿಣಮಿಸಿತು. ನನ್ನ ಸ್ವಂತ ಪಠಣಕ್ಕಾಗಿ ಗಂಗಾಲಹರಿಯನ್ನು ಕನ್ನಡಿಸಿಕೊಂಡಿದ್ದೆ ಬಹಳ ಹಿಂದೆ ಕೆಲ ಭಾಗವನ್ನು ಪ್ರಕಟಿಸಿಯೂ ಇದ್ದೆ. ಆದರೆ ಕೆಲವು ಅರಕಳಿಕೆಯಾಗಿ ಉಳಿದುಕೊಂಡಿತು. ಶ್ರೀ ಪಂಢರಿನಾಥಾಚಾರ್ಯರು ಪಿಯೂಷಲಹರಿಯನ್ನು ಕನ್ನಡಕ್ಕೆ ತಂದು ವಾತ್ಸಲ್ಯ ಭಾವಗೀತೆಗಳಿಗೆ ಪುಷ್ಟಿಯನ್ನು ತಂದಿದ್ದಾರೆ. ಇದರಂತೆಯೇ ಅವರಿಂದ ಸಂಸ್ಕೃತ ಕನ್ನಡ ಎರಡಕ್ಕೂ ಸೇವೆಯಾಗಲೆಂದು ಹಾರಯಿಸುತ್ತೇನೆ.

ಪಂಡಿತರಾಜ ಜಗನ್ನಾಥನ ಕಾದಂಬರೀಮಯವಾದ ಚರಿತ್ರೆಯನ್ನು ಸುಮಾರು 10–20 ವರ್ಷಗಳ ಪೂರ್ವದಲ್ಲಿಯೇ ಮಹಾರಾಷ್ಟ್ರ ಭಾಷೆಯಿಂದ ಕನ್ನಡಿಸಿದವರು ಆನವಟ್ಟಿಯ ಮೂಗೂರು ಹನುಮಂತಾಚಾರ್ಯರು. ಪಂಡಿತ ಕೇಶವಶರ್ಮ ಗಲಗಲಿಯವರೂ ವಾಗ್ಭೂಷಣದಲ್ಲಿ ಸ್ವತಂತ್ರವಾದ ಒಂದು ಪ್ರಬಂಧವನ್ನು ಬರೆದರು. ಶ್ರೀ ಗೋವಿಂದರಾವ ಟೇಂಗ್ಸೆಯವರು ಜಯಕರ್ನಾಟಕ ಗ್ರಂಥಮಾಲೆಯಲ್ಲಿ ಜಗನ್ನಾಥನ ರೋಮಾಂಚಕಾರಿಯಾದ ಜೀವನವನ್ನು ಕುರಿತು

ತರಂಗಿಣಿ ನಾಟಕವನ್ನು ಕ್ರಿ.ಶ. 1934ರಲ್ಲಿ ಬರೆದರು. ಪ್ರೇಮನೌಕೆಯ ಕವಿಗಳಾದ ಕುಸುಮಾಕರರು ಗಂಗಾಲಹರಿಯನ್ನು ಮೇಘರಗಳೆಯಲ್ಲಿಯೇ ಕನ್ನಡಿಸಿದರೂ, ಮುದ್ರಿಸಿಲ್ಲ. ಗಂಗಾಷ್ಟಕ, ಗಂಗಾವತರಣಗಳನ್ನು ಬಯಲಿಗೆ ಹರಿಸಿದ ಶಕ್ತಿಯೇ 'ಸಮೃದ್ಧಂ ಸೌಭಾಗ್ಯ ಸಕಲ ವಸುಧಾಯಾಃ ಕಿಮಪಿ ತತ್' ಎಂಬ ಗಂಗಾಲಹರಿಯ ಮೊದಲನೆ ಸಾಲಿನೊಳಗಿನ ಒಂದೊಂದು ಶಬ್ದವನ್ನು ಕುರಿತು ಐದು ಅಷ್ಟಷಟ್ಪದಿಗಳನ್ನು ಬರೆಯಿಸಿತು. ಜಗನ್ನಾಥ ಕವಿಯ ಕಾವ್ಯದ ಬಗ್ಗೆ ಸಹೃದಯತೆಯಿಂದ ಮಾತಾಡಿದ ಮತ್ತೆ ಹಲವರಿದ್ದಾರೆ. ನಮ್ಮೀ ನಾಡಿನಲ್ಲಿ, ಗಂಗೆಯ ಕೃಪೆ ತುಂಗೆಯ ಮಕ್ಕಳಾದ ನಮ್ಮ ಮೇಲಿರುವುದು ಆಶ್ಚರ್ಯವಲ್ಲ, ಆಚಾರ್ಯರ ಈ ಕಾವ್ಯದಿಂದ ಪಂಡಿತರಾಜನ ರಸಗಂಗಾಧರವೂ ಕನ್ನಡಕ್ಕೆ ಬರುವಂತಾಗಲಿ ಹೀಗೂ ಒಂದು ಬಯಕೆ.

ಸಂಸ್ಕೃತ ಭಾವಗೀತ ಸಾಹಿತ್ಯದಲ್ಲಿ, ಭರ್ತೃಹರಿಯ ಶತಕಗಳು, ಕಾಳಿದಾಸನ ಮೇಘದೂತ, ಶ್ರೀ ಶಂಕರಾಚಾರ್ಯರ ಸೌಂದರ್ಯಲಹರಿ, ಜಯದೇವನ ಗೀತಗೋವಿಂದ ಈ ಕಾವ್ಯಗಳು ತಮ್ಮ ಶಾಖೆಗಳನ್ನು ಚಾಚಿವೆ. ಜಗನ್ನಾಥ ಪಂಡಿತನ ಇತರ ಕೃತಿಗಳಲ್ಲಿ ಶ್ರೀ ಶಂಕರಾಚಾರ್ಯರ ಸ್ತೋತ್ರಗಳ ಮತ್ತು ಬೇರೆ ಬರವಣಿಗೆಯ ಕೃತಿ ಪ್ರಭಾವ ಕಂಡುಬರುತ್ತದೆ. ಪಿಯೂಷಲಹರಿಯೇ ಮೊದಲಾದ ಅವನ ಲಹರಿ ಕಾವ್ಯಗಳಿಗೆ ಶ್ರೀ ಶಂಕರರ ಸೌಂದರ್ಯಲಹರಿಯೇ ಪ್ರೇರಕಶಕ್ತಿ ಎಂದರೂ, ಅದರ ಔನ್ನತ್ಯ, ಗಂಭೀರತೆಗಳು ಇಲ್ಲಿಲ್ಲ. ಇದಕ್ಕೆ ಕಾರಣ ಜಗನ್ನಾಥ ಪಂಡಿತನ ಚಾರಿತ್ರ್ಯ ಮತ್ತು ವ್ಯಕ್ತಿತ್ವ. ತೆಲಂಗಣದ ದಿಲ್ಲೀಶ್ವರನ ಕೃಪಾಛತ್ರದಲ್ಲಿ ಸಾಕಷ್ಟು ಲಾಲಿತ್ಯವನ್ನೂ, ಔದ್ಧತ್ಯವನ್ನೂ ಸಂಪಾದಿಸಿ, ತನ್ನ ಪಾಂಡಿತ್ಯ ಪ್ರಪಂಚದಲ್ಲಿ ತಕ್ಕಷ್ಟು ಉನ್ಮತ್ತ ವಿಲಾಸವನ್ನು ಅನುಭವಿಸಿ ಕೊನೆಗೂ ತನ್ನ ಯಮಕದಲ್ಲಿಯೇ ಸದ್ಗತಿಯನ್ನು ಕಂಡುಕೊಂಡವನ ಕಾವ್ಯದ ಸಂಚಾರಿ ಭಾವಗಳ ಬಣ್ಣ ರಸವೇ ಬೇರೆಯಾದರೆ, ಅದು ಅಸ್ವಾಭಾವಿಕವೆನಿಸಲಾರದು. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ವಾತ್ಸಲ್ಯದ ಕರುಣಾವಿಲಾಸವನ್ನು ಭೋಗಿಸಿದವನು. ಆ ಸಂಸ್ಕಾರವನ್ನು ಕಳೆದುಕೊಳ್ಳುವದು ಸುಲಭವಲ್ಲ. ಪಂಡಿತರ ಬುದ್ಧಿಯಲ್ಲಿ ತನ್ನ ರಸಗಂಗಾಧರದಿಂದಲೂ ರಸಿಕರ ಮನದಲ್ಲಿ ತನ್ನ ಭಾಮಿನೀವಿಲಾಸ ಮತ್ತು ತನ್ನ ಜೀವನದೊಳಗಿನ ಶೃಂಗಾರೋಪಾಖ್ಯಾನದಿಂದಲೂ ಸ್ಥಾನ ಪಡೆದ, ತರ್ಕಕರ್ಕಶನೂ ಆಗಿದ್ದ ಈ ಪಂಡಿತ ಕವಿಯು ಪಿಯೂಷಲಹರಿಯ ಉದ್ಗಾರಗಳಿಂದ ಸಹೃದಯರಲ್ಲಿ ಅಮರತೆಯನ್ನು ಪಡೆದಿದ್ದಾನೆ ಗಾಢ ಸಂಸ್ಕಾರದಿಂದ.

ಗಂಗಾಲಹರಿ ಕನ್ನಡಕ್ಕೆ ಹರಿದು ಬಂದಿದೆ. ಜಗನ್ನಾಥ ಪಂಢರಿನಾಥರಾಗಿ ಅವತರಿಸಿದ್ದಾನೆ. ಆದರೆ ಆಚಾರ್ಯರ ಆವೇಶದಲ್ಲಿ ಇಲ್ಲಿಯ ಗಂಗೆಯು ಬೇಸಿಗೆಯ ನೆರೆಯಂತೆ ಬರದೆ, ವರ್ಷಾಕಾಲದ ಮಹಾಪೂರದಂತೆ ಬಂದಿದ್ದಾಳೆ. ಅದೂ ಸ್ವಾಗತಾರ್ಹವೇ ಶರತ್ಕಾಲದಲ್ಲಿ ಎಂಥ ಪ್ರವಾಹವೂ ಪ್ರಸನ್ನ ಸಲಿಲವಾಗುತ್ತದೆ. ಆಚಾರ್ಯರು ತಮ್ಮ ಭಾವಾನುವಾದಕ್ಕೆ ಮೇಘರಗಳೆಯನ್ನು ಹವಣು ಮಾಡಿದ್ದಾರೆ, ಹದಗೊಳಿಸಿದ್ದಾರೆ. ಜಗನ್ನಾಥನ ಲಹರಿಯು ಶಿಖರಿಣಿಯ ಛಂದದಲ್ಲಿ ಪ್ರವಹಿಸುವದು. ಮುಗಿತಾಯದಲ್ಲಿ ಪೃಥ್ವಿ, ಶಾರ್ದೂಲ ವಿಕ್ರೀಡಿತ, ಸ್ರಗ್ಧರಾ, ಇಂದ್ರೋಪೇಂದ್ರ ವಜ್ರಾ ವೃತ್ತಗಳು ಬಂದಿವೆ. ಇಲ್ಲಿಯ ಕವಿಯ ರಭಸವು ಎಲ್ಲವನ್ನೂ ಒಂದೇ ಗತ್ತಿಗೆ ಎಳೆದಿದೆ. ಶಿಖರಿಣಿಯ ಪ್ರಕೃತಿ ಪಂಚಮಾತ್ರಿಕ, ಮಂದಾಕ್ರಾಂತದ ಸರಣಿ ಚತುರ್ಮಾತ್ರಿಕ, ಆದರೂ ಪಂಢರಿನಾಥಾಚಾರ್ಯರು ತಮ್ಮ ಓಜಸ್ಸಿನಿಂದ ಛಂದವನ್ನೇ ಏಕೆ? ಶೈಲಿಯನ್ನೂ ಕೂಡ ತಮ್ಮದೇ ಆದ ಆಟೋಪ ಆಡಂಬರಕ್ಕೂ ಎತ್ತಿದ್ದಾರೆ. ಸದ್ಯದ ರೂಪವು ಶಕ್ತಿಯ ಅವಿರ್ಭಾವ.

ಜಗನ್ನಾಥ ಪಂಡಿತನ ಚರಿತ್ರೆಯನ್ನು ಬರೆದ ಮುಗೂರು ಹನುಮಂತಾಚಾರ್ಯರೇ ಗಂಗಾಲಹರಿಯನ್ನು ವಾರ್ಧಿಕ ಷಟ್ಪದಿಯಲ್ಲಿ ಕನ್ನಡಿಸಿದ್ದಾರೆ. ಮೊದಲನೆಯ ಪದ್ಯವನ್ನೇ ನೋಡೋಣ –

ಶ್ರೀ ವಧುವಿನ್ನೈಸಿರಿಯ ಸೌಭಾಗ್ಯ ಶಿಖರದಿಂ ।
ದಾವರಿಸುತ್ತೈತರುತೆ ಲೀಲಾವಿಲೋಲದಿಂ ।
ದಾವೇದಪಿಯೂಷಧಾರಾಸುರೂಪದಿಂ
ಪದಿನಾಲ್ಕು ಲೋಕಗಳನು ॥
ಭಾವ ಮಾತ್ರದಿ ಲೀಲೆಯಿಂ ಸೃಜಿಪ ಶಿವ ಮಹಾ ।
ದೇವನೈಶ್ವರ್ಯ ಸದ್ರೂಪದಮರತ್ವ
ನೀನೆ ಸುರದೇವ ಪುಣ್ಯೈಘಸಿಭಜಲವೆಮ್ಮ
ಪಾಪಮಂ ಶಮನಮಾಳ್ಕೆ ॥

ಇದರೊಡನೆ,

ಜಗದ ಭಾಗ್ಯ, ಜನಕೆಲ್ಲ ಭೋಗ್ಯ, ಸೌಭಾಗ್ಯ ಪೂರ್ಣ ಸಿರಿಯು

ಎಂಬ ಗತಿಲಯವನ್ನು ಉಸಿರಿನಲ್ಲಿ ತೂಗಿದಾಗ ಕನ್ನಡದ ಇಂದಿನ ನಯ ಮುಂಬರಿದ ರೀತಿಯು ಸುಖದೋರದೇ ಹೋಗದು.

ಗಂಗಾಲಹರಿಯು ಜತೆಗೆ, ವಾಲ್ಮೀಕಿ ವಿರಚಿತವೆನಿಸುವ ಒಂದು ಗಂಗಾಷ್ಟಕವನ್ನೂ ಕನ್ನಡಿಸಿದ್ದಾರೆ. ಈ ಸಂಗ್ರಹದಲ್ಲಿ ಜತೆಜತೆಗೆ ಸಂಸ್ಕೃತದ ಮೂಲವನ್ನೂ ಕೊಡಲಾಗಿದೆ. ಕೊನೆಗೆ ಮಂದಾಕಿನೀ ಅಭಿವಂದನೆ ಎಂಬ ಮೂರು ನುಡಿಗಳೂ ಇವೆ. ಕವಿ ತಮ್ಮನ್ನು ಮಂಕುತಿಮ್ಮ ಎಂದು ವಿನಯದಿಂದ ನೈಚ್ಯಾನುಸಂಧಾನದ ಕವಿ ಸಮಯವನ್ನು ಪಾಲಿಸಿದ್ದಾರೆ. ಗಂಗೆಯಲ್ಲಿ ಮುಳುಗಿ ಎದ್ದವರಿಗೆ ಮಂಕು ಉಳಿಯಲಾರದು ಎಂದು ನಾನು ಭಾವಿಸಿದ್ದೇನೆ. ಶ್ರೀ ರಾಮಕೃಷ್ಣ ಪರಮಹಂಸರಿಗೆ ಯಾರೋ ಪ್ರಶ್ನೆ ಮಾಡಿದರಂತೆ. ಗಂಗಾಸ್ನಾನ ಮಾಡಿದರೆ ಪಾಪನಾಶವಾಗುವದು ಎಂದು ಹೇಳುತ್ತಾರೆ. ಆದರೆ ವ್ಯವಹಾರದಲ್ಲಿ ಆ ಅನುಭವ ಬರುವದಿಲ್ಲ. ಇದೇನು ಚಮತ್ಕಾರ? ಗುರುಗಳು ಹೇಳಿದರಂತೆ ಗಂಗಾಸ್ನಾನಕ್ಕೆ ಹೊರಟವರ ಪಾಪವು ಅವರನ್ನು ಬಿಟ್ಟು ಮೊದಲೇ ದಂಡೆಯೀಚೆಗೆ ನಿಂತು ಬಿಡುತ್ತದೆ. ಆದರೆ ಗಂಗಾಸ್ನಾನ ತೀರಿಸಿ ಹೊರಬಿದ್ದಾಗ ಮೇಲೆ ಬಂದ ಮೊದಲನೆಯ ಮಾಲಿಕರನ್ನು ಗುರುತಿಸಬಹುದಾದರೆ ಗುರುತಿಸಿ ಸೇರಿಕೊಳ್ಳುತ್ತದೆ ಎಂದು ಹೇಳಿದರಂತೆ. ಶಕ್ತಿಯಲ್ಲಿ ಮಂಕು-ಕೊಂಕು ಮರೆತು ಹೋಗುತ್ತದೆ. ತಾಟಸ್ಥ್ಯದಲ್ಲಿ ಅದು ಮತ್ತೆ ಗೋಚರವಾಗುತ್ತದೆ. ಎಂಥ ಸ್ನೇಹದೀಪಶಿಖೆಗೂ ಮಕ್ಕು ಹಿಡಿಯದೆ ಬಿಡುವುದಿಲ್ಲ. ಆದರೆ ಅದನ್ನು ಉಜ್ವಲಗೊಳಿಸುವುದು ಸಹೃದಯರಕಾರ್ಯ.

ಶ್ರೀ ಪಂಢರಿನಾಥಾಚಾರ್ಯರ ಈ ಕನ್ನಡ ಭಾವಾನುವಾದವನ್ನು ಅವರ ಬಾಯಿಂದಲೇ ಕೇಳಿ ಶ್ರೋತೃಗಳು ತೃಪ್ತರಾಗುವರೆಂದು ನಾನು ನಂಬಿದ್ದೇನೆ. ಕೆಲವು ಪದ್ಯದ ಜಾತಿ ಬರಿ ವಾಚನಕ್ಕೆ ಯೋಗ್ಯ. ಇನ್ನೊಂದು ಹಾಡಿದರೇ ಸಫಲ. ಗಂಗಾಲಹರಿ ಗಮಕಕ್ಕೆ ಒಗ್ಗುವ ಹಿಗ್ಗುವ ಹಾಡು. ಅದರಿಂದಲೇ ಅದರ ಪ್ರಭಾವ ಪ್ರಸಾರ

ಧಾರವಾಡ

ದ.ರಾ. ಬೇಂದ್ರೆ

# ಲೇಖಕನ ಅರಿಕೆ

ಗಂಗಾಲಹರಿ ತನ್ನದಾದ ಮಾಧುರಿಯಿಂದ ಚಿಕ್ಕಂದಿನಲ್ಲಿಯೇ ನನ್ನ ಮನಸೆಳೆದಿತ್ತು. ಕನ್ಯಾಗತ ಸಮಯದಲ್ಲಿ ಭಾಗೀರಥಿ ಕೃಷ್ಣೆಗೆ ಬರುವ ಸಂದರ್ಭದಲ್ಲಿ ನಮ್ಮ ಗಲಗಲಿ ಊರಲ್ಲಿಯ ವಿದ್ಯಾವಂತರೆಲ್ಲ ದಾರಿಗುಂಟ ಉಚ್ಚಕಂಠದಿಂದ ಗಂಗಾಲಹರಿಯನ್ನು ಅನ್ನುತ್ತ ಉತ್ತರದ ಪುಣ್ಯ ನದಿಯನ್ನು ಕರುನಾಡಿಗೆ ಕರೆತರುವ ಆ ದೃಶ್ಯ, ಆ ವೈಭವದ ಮಂದಾಕಿನೀ ಮೆರವಣಿಗೆ ನನ್ನ ಕಣ್ಣ ಮುಂದೆ ಇಂದಿಗೂ ಕಟ್ಟಿದಂತಿದೆ. ತತ್ವ ಮಹತ್ವಗಳ ದೃಷ್ಟಿಯಿಂದ ಇತೋಪ್ಯತಿಶಯ ಪ್ರಕೃಷ್ಟವಾದ ವಿಶ್ವವಂದ್ಯ ಶ್ರೀ ಸತ್ಯಧರ್ಮರ ಗಂಗಾಸ್ತೋತ್ರ ವೇದ ಸಮ್ಮಿಳಿತವಾದುದರಿಂದ ಅದನ್ನು ಎಲ್ಲರಿಗೂ ಹೇಳುತ್ತಿರಲಿಲ್ಲ. ಇಂದಿಗೆ 24 ವರುಷಗಳ ಹಿಂದೆ ಗಂಗೆ ಬರುವ ಮುಹೂರ್ತದಲ್ಲಿ ಮಂದಾಕಿನಿ ಸುಧಾ ಎಂಬ ಚಿಕ್ಕವಯಸ್ಸಿನ ನನ್ನ ಇಬ್ಬರು ಅಕ್ಕಂದಿರು ನರಸಿಂಹ ಘಾಟಿನ ಜಾನುದಘ್ನ ಜಲದಲ್ಲಿ ನಿಂತು 'ಸುಧಾ ಸೌಂದರ್ಯ ತೇ ಸಲಲ ಮಶಿವಂ ನಃ ಶಮಯತು' ಎಂಬು ಮಂಜುಘೋಷದಿಂದ ಆ ಜಲದೇವಿಯನ್ನು ಆವಾಹನೆ ಮಾಡಿದಾಗಲೇ ಗಂಗೆ ನನ್ನ ಹೃದಯ ಕಮಂಡಲುವಿನಲ್ಲಿ ಇಳಿದುಬಿಟ್ಟಳು. ನನಗೆ ತಿಳುವಳಿಕೆ ಬರುವ ಮೊದಲೇ ಗಂಗಾಲಹರಿ ನನ್ನ ನಾಲಿಗೆಯಲ್ಲಿ ನೆಲೆಸಿ ಅರ್ಥ ತಿಳಿಯದಿದ್ದರೂ 'ಮರುಲ್ಲೀಲಾಲೋಲಲ್ಲಹರಿಲುಲಿತಾಂ ಭೋಜಪಟಲೀ', 'ನಕಾಕಾನಾಕಾಧೀಶ್ವರನಗರಸಾಕಾಂಕ್ಷಮನಸಃ', ವಿಶಾಲಾಭ್ಯಾಮಾಭ್ಯಾಂಕಿಮಿಹ ನಯನಾಭ್ಯಾಂ' ಮೊದಲಾದ ಪ್ರಾಸಬದ್ಧ ಪಾದಪಲ್ಲವಿಗಳು ತಮ್ಮಷ್ಟಕ್ಕೆ ತಾವೇ ತುಟಿತಟದಲ್ಲಿ ಕುಳಿತಾಗ ನಿಂತಾಗಲೆಲ್ಲ ತಾಳಲಯತೂಕದಲ್ಲಿ ತೂಗುತ್ತಲಿದ್ದವು. ಅರ್ಥ ತಿಳಿದಬಳಿಕಂತೂ ಭಾವಭಾಂಡಾರದ ಬಾಗಿಲನ್ನೇ ತೆರೆದಂತಾಯಿತು. ಆ ರಸಾವೇಶದಲ್ಲಿ ಗಂಗಾಲಹರಿಯ ಅಷ್ಟೋತ್ತರ ಮಾಡಿದ್ದರೂ ಮಾಡಿರಬಹುದು. ಅಂತೂ ಗಂಗಾಲಹರಿ ನನಗೆ ಕೇವಲ ಕಾವ್ಯಖಂಡ ಮಾತ್ರವಾಗದೇ ಲೌಕಿಕ ಜೀವನದಲ್ಲಿ ರಸಮಂತ್ರವಾಗಿದೆ. ಸರ್ವಾಂಗ ಸಂತರ್ಪಣೆಗೈಯುವ ಶಬ್ದಜ್ಯೋತ್ಸ್ನೆಯಾಗಿದೆ. ನಾನು ಬಾಗಲಕೋಟೆಯಲ್ಲಿದ್ದಾಗಲೂ ಅನೇಕ

ವಿದ್ಯಾರ್ಥಿಗಳಿಗೆ ಗಂಗಾಲಹರಿಯ ರಸಸ್ವಾರಸ್ಯ, ನಾದಮಾಧುರ್ಯ, ಭಾವ ಸೌಂದರ್ಯಗಳ ಬಗ್ಗೆ ತಿಳಿಸಿ ಹೇಳಿ ಆನಂದಪಡುತ್ತಿದ್ದೆ.

ಈ ಸಲ ಕನ್ಯಾಗತದ ಸಂದರ್ಭದಲ್ಲಿ ನನ್ನ ಅವ್ಯಾಜ ಸೋದರರಾದ ಮಳಿಗಿ ಜಯರಾಮಾಚಾರ್ಯರು ಕನ್ನಡ ಕವೀಂದ್ರರಾದ ಬೇಂದ್ರೆಯರ ಕನ್ನಡ ಮೇಘದೂತವನ್ನು ತಂದು ತೋರಿಸಿ ಈ ಧಾಟಿಯಲ್ಲಿ ಗಂಗಾಲಹರಿಯನ್ನು ನೀವೇಕೆ ಕನ್ನಡಿಸಬಾರದೆಂದು ಕೇಳಿದರು. ಗಂಗಾಲಹರಿಯನ್ನು ಕನ್ನಡಕ್ಕೆ ತರುವದು ಭಗೀರಥ ಗಂಗೆಯನ್ನು ಪಾತಾಳಕ್ಕೆ ತರುವದಕ್ಕಿಂತ ಕಠಿಣ. ಅದಕ್ಕೆ ಭಗೀರಥನ ಪ್ರಯತ್ನ, ಜಗನ್ನಾಥನ ಪ್ರತಿಭೆ ಎರಡೂ ಬೇಕು. ಉಭಯಾಭಾವವಿರುವ ಪಂಢರಿನಾಥ ಉತ್ಸಾಹದ ಹುಚ್ಚು ಲಹರಿಯಲ್ಲಿ ಗಂಗಾಲಹರಿಯನ್ನು ಕನ್ನಡಕ್ಕೆ ಇಳಿಸಹೊರಟರೆ ಆ ರಸಭಟ್ಟಿ ಸರಿಯಾಗಿ ಇಳಿಯದೇ ಅವನೇ ರಸಾತಳಕ್ಕೆ ಇಳಿಯಬೇಕಾಗುವದು ಎಂದು ನಗೆಯಾಡಿ ಕಳಿಸಿದೆ.

ಹೀಗೆ ನಾನೇನೋ ಭಾಷಾಂತರದ ವಿಚಾರವನ್ನು ಬಿಟ್ಟರೂ ಆ ಗಂಗೆಯ ಗುಂಗು ಮಾತ್ರ ನನ್ನನ್ನು ಬಿಡಲಿಲ್ಲ. ಸಂಜೆಯವರೆಗೂ ಹಾಡಿ ಹೊಸೆದು ಮಿದುಳು ಮಸೆದು ಏನೇನೋ ಗುಣಗುಟ್ಟುತ್ತಲಿರುವಾಗಲೇ ಕೆಲವು ಪದ್ಯಗಳು ಕೂಡಿದ್ದವು. ಅವುಗಳನ್ನು ಓದಿ ನೋಡಿದಾಗ ಭಾಷೆ ಏನೋ ಒಂದು ಹದಕ್ಕೆ ಬಂದು ಆ ಮಂದಾಕಿನಿಯು ನನ್ನಂಥ ಮಂದನನ್ನೇ ಮುಂದೆ ಮಾಡಿಕೊಂಡು ಕನ್ನಡಕ್ಕೆ ಕಾಲಿಡಲು ಹವಣಿಸುತ್ತಿದ್ದಾಳೆಂದು ತೋರಿತು. 'ನಿಮಿತ್ತ ಮಾತ್ರಂ ಭವ ಮಂದಬುದ್ಧೇ' ಎಂದಂತಾಯಿತು.

ಅದೇ ರಸಾವೇಶದಲ್ಲಿ ಎಂಟು ದಿನ ಅದಕ್ಕೆ ಗಂಟುಬಿದ್ದು ಭಾಷಾಂತರವನ್ನು ಮುಗಿಸಿಬಿಟ್ಟೆ. ಆದರೆ 'ಆಪರಿತೋಷಾದ್ ವಿದುಷಾಂ ಆತ್ಮನ್ಯಪ್ರತ್ಯಯಂ ಚೇತಃ' ಎಂಬಂತೆ ನನಗೆ ಧೈರ್ಯವಿರಲಿಲ್ಲ. ಒಂದು ದಿನ ಧಾರವಾಡಕ್ಕೆ ಒಯ್ದು ಕವಿವರ್ಯ ಬೇಂದ್ರೆಯವರಿಗೆ ತೋರಿಸಿದೆ. ಅವರು ಅದನ್ನು ನೋಡಿ ಮೆಚ್ಚಿ ಸಾಯಂಕಾಲ ಕೆಲವು ಜನ ಸಾಹಿತ್ಯಭಕ್ತರನ್ನು ಕರೆದುಕೊಂಡು ಬಂದು ಲಕ್ಷ್ಮಣರಾವ ಬೇಂದ್ರೆಯವರ ಅಟ್ಟದಮೇಲೆ ಒಂದು ಚಿಕ್ಕ ಕಾವ್ಯ ಗೋಷ್ಠಿಯನ್ನೇ ಏರ್ಪಡಿಸಿ ಇದನ್ನು ಕೇಳಿ ಆನಂದಿಸಿದರು. ಕನ್ನಡದ ಕವೀಶ್ವರ ಕಾಳಿದಾಸನಂತಿರುವ ಅವರು ನವಕವಿಗಳ ವಿಷಯದಲ್ಲಿ ತೋರುವ ಆದರ, ಕೊಡುವ ಪ್ರೋತ್ಸಾಹನೆಯನ್ನು ಕಂಡು 'ವಕ್ತ್ರವಿಶೇಷನಿಸ್ಪ್ರಹಾ ಗುಣಗೃಹ್ಯಾ ವಚನೇ ವಿಪಶ್ಚಿತಃ' ಎಂಬ ಭಾರವಿಯ ಮಾತು ನೆನಪಾಯಿತು.

ಗಂಗಾಲಹರಿಯನ್ನು ನಿತ್ಯವೂ ಕೇಳಿ ಆನಂದಪಟ್ಟು ಸ್ವಯಂ ಪ್ರೇರಣೆಯಿಂದ 51 ರೂಪಾಯಿಗಳನ್ನು ಕೊಟ್ಟು ಉಪಕರಿಸಿದ ಶ್ರೀ ಕೆ.ಜಿ. ಕುಷ್ಟಗಿ ಬಿ.ಎ.ಎಲ್.ಎಲ್.ಬಿ. ವಕೀಲ, ಎಸ್.ಜಿ.ಕುಷ್ಟಗಿ ಬಿ.ಎ. ಇವರಿಬ್ಬರನ್ನು ಇಲ್ಲಿ ನೆನೆಯಬೇಕಾದ್ದು ಅತ್ಯಗತ್ಯ. ಇವರು ತಮ್ಮ ಮನೆಯಲ್ಲಿ ಒಂದು ತಿಂಗಳವರೆಗೆ ಕುಮಾರ ಸಂಭವ, ಮೇಘದೂತ. ರಘುವಂಶ, ಸೌಂದರ್ಯಲಹರೀ ಗಂಗಾಲಹರಿಗಳನ್ನು ಸಕುಟುಂಬ, ಸಪರಿವಾರ ಆಸ್ಥೆಯಿಂದ ಕುಳಿತು ಆಲಿಸುತ್ತಿದ್ದರು. ಶ್ರೀಮಂತ ಮನೆತನದ ಹತ್ತಾರು ಇಂಥ ರಸಿಕ ಕುಟುಂಬಗಳು ಈ ತರಹದ ಸಾಹಿತ್ಯೋಪಾಸನೆಗೆ ಸಿದ್ಧವಾದರೆ ಬುದ್ಧಿವಂತರು ಬರೆದಿಟ್ಟ ಎಷ್ಟೋ ಕೃತಿಗಳು ಬೆಳಕಿನ ಮುಖವನ್ನು ಕಾಣಬಹುದು.

ನಾನು ಮೊನ್ನಿನ ಗಣೇಶಚವತಿಯಲ್ಲಿ ಕೊಪ್ಪಳದಲ್ಲಿ ಗಂಗಾಲಹರಿಯ ಬಗೆಗೆ ಮಾತನಾಡಿದೆ. ಆಗ ಜಗನ್ನಾಥನ ರೋಮಹರ್ಷಣವಾದ ಕಥೆ ವ್ಯಥೆ ವಿಲಾಪಗಳ ಹಿನ್ನೆಲೆಯಲ್ಲಿ ಗಂಗಾಲಹರಿಯನ್ನು ಹಾಡಿ ಹೇಳಿದಾಗ ಅಲ್ಲಿಯ ರಸಿಕರಾದ ಸಹಸ್ರಾರು ಜನ ನಾಗರಿಕ ನರನಾರಿಯರು ಭಾವನಾವಶರಾಗಿ ಆ ರಸ ಬುಗ್ಗೆಯನ್ನು ಕಂಡು ಹಿಗ್ಗಿದರು. ಕನ್ನಡ ಗಂಗಾಲಹರಿಯ ಪ್ರತಿಯೊಂದು ಪದ್ಯವೂ ಕೊಪ್ಪಳದ ಸಹೃದಯರ ಹೃದಯದಲ್ಲಿ ಆನಂದದ ಊರ್ಮಿಗಳನ್ನು ಎಬ್ಬಿಸಿ ರಸನಿರ್ಭರರನ್ನಾಗಿ ಮಾಡಿತ್ತು.

ಉಪನ್ಯಾಸವೆಲ್ಲ ಮುಗಿದ ಬಳಿಕ ಅಲ್ಲಿಯ ನಾಗರಿಕರು ಸ್ವಸಂತೋಷದಿಂದ ಮುಂದೆ ಬಂದು ಗಂಗಾಲಹರಿಯ ಮುದ್ರಣದ ಸರ್ವ ವೆಚ್ಚವನ್ನೂ ವಹಿಸುತ್ತೇವೆಂದು ಹೇಳಿದರು. ಆ ಸಭಾಂಗಣದಲ್ಲಿಯೇ ತಕ್ಷಣದಲ್ಲಿ ಪರ್ಯಾಪ್ತ ಧನಸಂಗ್ರಹವೂ ಆಗಿಹೋಯಿತು. ಪುರಾಣಪ್ರಥಿತ ಹಾಗೂ ಇತಿಹಾಸ ಪ್ರಸಿದ್ಧವಾದ ಕೋಪಣನಗರದ ನಾಗರಿಕರಿಗೆ ಯಾವದು ತಾನೆ ಅಶಕ್ಯ? ಆಕಸ್ಮಿಕವಾದ ಈ ಸಹಾಯ ಹಣ ಬಾರದಿದ್ದರೆ ಗಂಗಾಲಹರಿ ಇನ್ನೂ ಎಷ್ಟು ದಿನ ನಮ್ಮ ಮನೆಯ ಮೂಲೆಯ ಮಾಡದಲ್ಲಿ ಮೂಷಕಮೂಸಿತವಾಗಿ ಅಜ್ಞಾತವಾಸವನ್ನು ಅನುಭವಿಸಬೇಕಾಗುತ್ತಿತ್ತೋ ದೇವರೇಬಲ್ಲ. ಈ ಕೃತಿ ಪ್ರಕಾಶನಕ್ಕೆ ಸಹಾಯ ಸಲ್ಲಿಸಿದ ಹಾಗೂ ಕೇಳಿ ಆನಂದಿಸಿದ ಎಲ್ಲ ಸಹೃದಯರಿಗೂ ಗಂಗೆ, ಗಂಗಾಧರ, ಗಂಗಾಜನಕ ದೇವತೆಗಳು ಪ್ರಸನ್ನರಾಗಿ ಪುರುಷಾರ್ಥಗಳನ್ನೆಲ್ಲ ಒದಗಿಸಲೆಂದು ಪ್ರಾರ್ಥಿಸುವೆ.

ಈ ಗ್ರಂಥಕ್ಕೆ ವಿಮರ್ಶಾತ್ಮಕವಾದ ಒಳ್ಳೆ ಮುನ್ನುಡಿಯನ್ನು ಬರೆದುಕೊಟ್ಟ ಕವಿರಾಜ ಶ್ರೀ ಬೇಂದ್ರೆಯವರಿಗೆ ಅನಂತ ಅಭಿನಂದನೆಗಳು. ನಾನು ಈ ಅನುವಾದಕ್ಕೆ ಸರ್ವರೀತಿಯಿಂದಲೂ ಸ್ಫೂರ್ತಿ ಪಡೆದದ್ದು ಮೇಘದೂತದ ರಸಾನುವಾದದಿಂದಲೇ. ನವನವೋನ್ಮೇಷಿಪ್ರಭಾಪ್ರಸೂತವಾದ ಅವರ ಸಾಹಿತ್ಯ ಅನೇಕ ನವಕವಿಗಳಿಗೆ ರಸವಲಯದಲ್ಲಿ ಧೃವಸ್ಥಾನ ತೋರಿಸುವ ದಾರಿದೀಪವಾಗಿ ನಿಂತುಕೊಂಡಿದೆ.

ನಾನು ಕೇಳಿದ ಕೂಡಲೇ ಆ ಕ್ಷಣದಲ್ಲಿ ಚಿಕ್ಕದಾದರೂ ಸರ್ವಾಭಿಪ್ರಾಯ ಸಂಗ್ರಾಹಕವಾದ ಸ್ವಾರಸ್ಯವಾದ ಅಭಿಪ್ರಾಯನ್ನು ಬರೆದು ಕಳುಹಿದ ಪ್ರಾಚಾರ್ಯ ವಿ.ಕೃ. ಗೋಕಾಕರವರಿಗೆ ತುಂಬಾ ಋಣಿಯಾಗಿದ್ದೇನೆ. ಹಾಗೂ ಅಲ್ಪಾವಕಾಶದಲ್ಲಿ ಎಲ್ಲರ ಮನಮೆಚ್ಚುವಂತೆ ಮುದ್ದಾಗಿ ಮುದ್ರಿಸಿ ಕೊಟ್ಟ ಮಿತ್ರವರ್ಯ ಶ್ರೀ ಹೊಂಬಾಳಿ ಪದ್ಮಾಚಾರ್ಯರ ಉಪಕಾರವನ್ನು ಇಲ್ಲಿ ನೆನೆಯದಿರಲಾರೆ. ಇದರಂತೆ ಈ ರಸ ಕೃತಿ ಹೊರಬರಲು ಅನೇಕ ರೀತಿಯಿಂದ ಸಹಾಯ ಸಲ್ಲಿಸಿದ ಎಲ್ಲ ಸಹೃದಯರಿಗೂ ಮಿತ್ರರಿಗೂ ಮತ್ತೊಮ್ಮೆ ಅಭಿನಂದನೆ ಸಲ್ಲಿಸಿ ವಿರಮಿಸುತ್ತೇನೆ.

ಪಂಢರಿನಾಥಾಚಾರ್ಯ ಗಲಗಲಿ

# ತೀರ್ಥ ಪ್ರಸಾದ

ರಸಿಕರಾಜ ಜಗನ್ನಾಥ ತಪಿಸೆ ವಾಙ್ಮಯ ಭಗೀರಥಾಗಿ
ವಾಣಿ ರಾಣಿ ಎದೆ ಕರಗಿ ಹರಿದಿತೋ ಕರುಣೆ ಕೋಡಿಯಾಗಿ ॥
ಅವನು ಇಟ್ಟಪದ ಬಂಧ ಛಂದ ನಿರ್ಬಂಧದಲ್ಲಿ ನಿಂದು
ಹಾಡಿದಂತೆ ಹರಿದಿಹಳು ಲಹರಿ ಸ್ವಚ್ಛಂದ ರಸದ ಸಿಂಧು ॥ 1 ॥

ಶಬ್ದಬ್ರಹ್ಮರಾಶಿऽऽ ರಸವ ತುಂಬಿದರು ಕಿವಿ ಕಮಂಡಲಲ್ಲಿ
ಕೆಲ ಗಿರೀಶರಾದರದಿ ತಲೆಯ ಮೇಲಿಟ್ಟು ಕುಣಿದರಿಲ್ಲಿ ॥
ಜನ್ಹು ಜಾಣರಾತುರದಿ ರಸವನೀಂಟಿದರಗಸ್ತ್ಯಬಂಧು
ನಾನು ಮಿಂದು ಮಕರಂದ ಸಿಂಧು ಆಚಮಿಸಿದೆರಡು ಬಿಂದು ॥ 2 ॥

ಉಂಡು ಉಂಡು ಮನಗಂಡು ಬಂಡು ರಸ ತೃಪ್ತಿಗೊಂಡು ಕೊನೆಗೆ
ಎನ್ನ ಒಡಕ ಕನ್ನಡದ ಕಲಶ ತುಂಬಿಂದು ತಂದೆ ಮನೆಗೆ ॥
ಗೊಲ್ಲ ಭಿಲ್ಲ ಕುಡಿಕೆಯಲಿ ತಂದ ಮಕರಂದದಂತೆ ಎನ್ನ
ಪಾತ್ರ ಗೌಣ ತೀರ್ಥ–ಪ್ರಸಾದವೆಂದಂದು ಕೊಳ್ಳೆ ಧನ್ಯ ॥ 3 ॥

ಏನೆ ಆದರೂ ಮೂಲರಸವು ಅನುವಾದದಲ್ಲಿ ಬರದು
ಎಂಥ ನಿಲುವುಗನ್ನಡಿಯು ಪದ್ಮಿನೀಚೆಲುವ ಬಿಂಬಿಸಿರದು ॥
ಆದರದರ ಮಧುಮಧುರ ರುಚಿಯ ಕೆಲ ವೀಚಿ ಚಾಚೆ ಸಾಕು
ನರರ ದೇಹ ಪರಿಶುದ್ಧಿಗೊಳಿಸೆ ಶುಚಿತೀರ್ಥವೆಷ್ಟು ಬೇಕು? ॥ 4 ॥

# ಅರ್ಪಣೆ

ಮಹಾಕವಿ ಕುಮಾರವ್ಯಾಸನಲ್ಲಿ ನಿಂತು
ಕನ್ನಡ ಮಹಾಭಾರತವನ್ನು ಬರೆಯಿಸಿದ
ಕನ್ನಡ ಕವಿಗಳ ಕುಲದೈವತೆಯಾದ
**ಗದುಗಿನ ಶ್ರೀ ವೀರನಾರಾಯಣನ ಅಡಿದಾವರೆಗಳಲ್ಲಿ ಈ ಕೃತಿ**
**ಭಕ್ತಿಯಿಂದ ಸಮರ್ಪಿತ.**

*****

# ಸಾದರ ಕೃತಜ್ಞತೆಗಳು



## ಶ್ರೀ ಪಾಂಡುರಂಗರಾವ್ ಲಕ್ಷ್ಮೇಶ್ವರ
## ಧಾರವಾಡ

ಆಚಾರ್ಯರಿಂದ ತಮ್ಮ ಮನೆಯಲ್ಲಿ ಗಂಗಾಲಹರಿ ಪ್ರವಚನ ಮಾಡಿಸಿ ಈ ಗ್ರಂಥ ಪ್ರಕಾಶನಕ್ಕೆ ಬೆಂಬಲ ನೀಡಿದ;

ಶ್ರೀ ಪಾಂಡುರಂಗರಾವ್ ಲಕ್ಷ್ಮೇಶ್ವರ
ಶ್ರೀ ಮಧುಸೂದನ ಕಸ್ಬೆ
ಶ್ರೀ ರಾಘವೇಂದ್ರರಾವ್ ಕೃಷ್ಣರಾವ್ ದೇಶಪಾಂಡೆ

ಮೊದಲಾದ ಎಲ್ಲ 'ಗಂಗಾಲಹರಿ ಅಭಿಮಾನಿ ಶ್ರೋತೃವೃಂದ'ಕ್ಕೆ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರೂಫ್ ರೀಡಿಂಗ್, ಪ್ರೆಸ್‌ನ ಓಡಾಟ ಮುಂತಾದವನ್ನು ಪ್ರೀತಿಯಿಂದ ನಿರ್ವಹಿಸಿದ ಸಹೋದರಿ ಸೌ. ಭಾಗ್ಯಶ್ರೀ ಮನ್ನಾರಿ ಹಾಗೂ ಶ್ರೀ ವೇಂಕಟೇಶ ಮನ್ನಾರಿ ದಂಪತಿಗಳನ್ನು, ಸುಂದರವಾದ ಮುಖಪುಟ ವಿನ್ಯಾಸಗೊಳಿಸಿದ ಮಿಹೀರ್ ಗ್ರಾಫಿಕ್ಸ್‌ನ ಶಂಕರ ಬೆನ್ನೂರ ಇವರನ್ನು, ಸಕಾಲದಲ್ಲಿ ಮುದ್ರಿಸಿಕೊಟ್ಟ ಜಗದೀಶ ಘಾಣೇಕರ ಇವರನ್ನು ನೆನೆಯದಿರಲಾರೆ.

## ಸಾದರ ಕೃತಜ್ಞತೆಗಳು



### ಶ್ರೀ ರಾಘವೇಂದ್ರರಾವ್ ಕೃಷ್ಣರಾವ್ ದೇಶಪಾಂಡೆ

ಶ್ರೀ ಪಂಢರೀನಾಥಾಚಾರ್ಯ ಗಲಗಲಿಯವರ ಋಣ ನನ್ನ ಮೇಲೆ ಅಷ್ಟಿಷ್ಟಲ್ಲ. ನನ್ನ ವಿದ್ಯಾಗುರುಗಳಾಗಿ ನನ್ನ ಸ್ವರೂಪೋದ್ಧಾರಕರಾದ ಗುರುಗಳಿಗೆ ಏನಾದರೂ, ನನ್ನ ಶಕ್ತ್ಯಾನುಸಾರ, ಅಳಿಲುಸೇವೆ ಮಾಡಿ ಗುರುದಕ್ಷಿಣೆ ಕೊಡಬೇಕು ಎನ್ನುವ ಹಂಬಲ ಬಹಳ ದಿನಗಳಿಂದ ಕಾಡುತ್ತಲೇ ಇತ್ತು. ಇಂಥದರಲ್ಲಿ ಒಂದು ಸದವಕಾಶ ಒದಗಿ ಬಂತು. ಆಚಾರ್ಯರ ಬಾಯಿಂದ ಪಂ. ಜಗನ್ನಾಥ ಕೃತ ಗಂಗಾಲಹರಿಯನ್ನು ಬಾಲ್ಯದಲ್ಲಿಯೇ ಕೇಳಿದ ನಾನು ಸದಭಿರುಚಿಯಿಂದ ನನ್ನ ಮಕ್ಕಳಿಗೆ ಹಾಗೂ ಮೊಮ್ಮಕ್ಕಳಿಗೆ ನನ್ನ ಯೋಗ್ಯತಾಸಾರವಾಗಿ ನಾನು ಕೇಳಿ ತಿಳಿದಷ್ಟು ಆಗಾಗ್ಗೆ ಹೇಳಿಕೊಡುತ್ತಿದ್ದೆ. ಕುತೂಹಲದಿಂದ ಅವರು ನನ್ನ ಚಿಕ್ಕ ಗ್ರಂಥಾಲಯದಲ್ಲಿ ಹುಡುಕಿದಾಗ ಅವರ ಕೈಗೆ ಸಿಕ್ಕಿದ್ದು ಜೀರ್ಣವಾದ ಆಚಾರ್ಯರ 1952 ರ ಗಂಗಾಲಹರಿಯ ಒಂದು ಚಿಕ್ಕ ಹೊತ್ತಿಗೆ. ಅದನ್ನು ಓದುತ್ತಿದ್ದಂತೆ ಆಚಾರ್ಯರ ಹಳೆಯ ನೆನಪುಗಳು, ಅವರು ಪಾಠ ಮಾಡುತ್ತಿದ್ದ ಶೈಲಿ ಎಲ್ಲವು ಕಣ್ಮುಂದೆ ಕ್ಷಣಾರ್ಧದಲ್ಲಿ ಹಾದುಹೋದವು. ಆಗ ಅನಿಸಿತು. ಆಚಾರ್ಯರ ಈ ಕನ್ನಡ ಗಂಗಾಲಹರಿಯನ್ನು ಪುನರ್ಮುದ್ರಿಸುವುದೇ ಆಚಾರ್ಯರಿಗೆ ನಾನು ಕೊಡಬಹುದಾದ ಕಿರುಕಾಣಿಕೆ. ಅಂತೆಯೇ ಪೂಜ್ಯ ಆಚಾರ್ಯರ ಸುಪುತ್ರರೂ ನನ್ನ ಗುರುಬಾಂಧವರೂ ಆದ ಶ್ರೀಯುತ ಪಂ. ಗೋಪೀನಾಥಾಚಾರ್ಯ ಗಲಗಲಿಯವರು ಬಹಳ ಸಹೃದಯತೆಯಿಂದ ಪುನರ್ಮುದ್ರಣಕ್ಕೆ ಒಪ್ಪಿಕೊಂಡು ಈಗಾಗಲೇ ಅವರು ತಯಾರಿಸಿದ ಕರಡು ಪ್ರತಿಯನ್ನು ನಮಗೆ ತೋರಿಸಿ

ಪುನರ್ಮುದ್ರಣದ ಜವಾಬ್ದಾರಿಯನ್ನು ನನಗೊಪ್ಪಿಸಿ ನನ್ನ ಮೇಲೆ ಮಹದುಪಕಾರವನ್ನು ಮಾಡಿದ್ದಾರೆ.

ನಾನು ಆಚಾರ್ಯರ ಮುಖದಿಂದ ಕಲಿತ ಪಂ. ಜಗನ್ನಾಥಕೃತ 'ಗಂಗಾಲಹರಿ–ಭಾವಾನುವಾದ' ಈಗಿನ ಪೀಳಿಗೆಗೂ ದೊರಕುವಂತಾಗಲಿ ಎಂಬ ಆನಂದದಿಂದ ಈ ಚಿಕ್ಕ ಹೊತ್ತಿಗೆಯನ್ನು ನನ್ನ ಗುರುಗಳ ಅಂತರ್ಯಾಮಿಯಾದ ಗುರುಸಾರ್ವಭೌಮ ಶ್ರೀ ರಾಘವೇಂದ್ರ, ಗುರ್ವಂತರ್ಗತ ಶ್ರೀ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಗೆ ಸಮರ್ಪಿಸುತ್ತಿದ್ದೇವೆ.

ನಾನು ನನ್ನ ಇಳಿ ವಯಸ್ಸಿನ ಈ 80ರ ಹರೆಯದಲ್ಲೂ, ಈ ತನಕ ಆಚಾರ್ಯರು ಹೇಳಿದಂತೆ ಗಂಗಾಲಹರಿಯನ್ನು ಬೇರೆ ಯಾರಿಂದಲೂ ಕೇಳಿಲ್ಲ .

'ದೇವರೆಂದರೆ ತ್ವರಿತಾಲಯ ನರಸಪ್ಪ. ಗುರುಗಳೆಂದರೆ ಶ್ರೀ ಗಲಗಲಿ ಪಂಢರೀನಾಥಾಚಾರ್ಯರು' ಎಂದರೆ ಅತಿಶಯವಾಗಲಾರದು.

ಶ್ರೀ ಕೃಷ್ಣಾರ್ಪಣಮಸ್ತು

# ಸಂಸ್ಕೃತ ಗಂಗಾಲಹರಿ

1)
ಸಮೃದ್ಧಂ ಸೌಭಾಗ್ಯಂ ಸಕಲ ವಸುಧಾಯಾಃ ಕಿಮಪಿ ತನ್।
ಮಹೈಶ್ವರ್ಯಂ ಲೀಲಾಜನಿತಜಗತಃ ಖಂಡಪರಶೋಃ॥
ಶ್ರುತೀನಾಂ ಸರ್ವಸ್ವಂ ಸುಕೃತಮಥ ಮೂರ್ತಂ ಸುಮನಸಾಂ।
ಸುಧಾಸೌಂದರ್ಯಂ ತೇ ಸಲಿಲಮಶಿವಂ ನಃ ಶಮಯತು॥

2)
ದರಿದ್ರಾಣಾಂ ದೈನ್ಯಂ ದುರಿತಮಥ ದುರ್ವಾಸನಹೃದಾಂ।
ದ್ರುತಂ ದೂರೀಕುರ್ವನ್ ಸಕೃದಪಿ ಗತೋ ದೃಷ್ಟಿ ಸರಣಿಮ್॥
ಅಪಿ ದ್ರಾಗಾವಿದ್ಯಾ–ದ್ರುಮ–ದಲನ –ದೀಕ್ಷಾ–ಗುರುರಿಹ।
ಪ್ರವಾಹಸ್ತೇ ವಾರಾಂ ಶ್ರಿಯಮಯಮಪಾರಾಂ ದಿಶತು ನಃ॥

3)
ಉದಂಚನ್ ಮಾರ್ತಂಡ –ಸ್ಫುಟ–ಕಪಟ–ಹೇರಂಬ–ಜನನೀ–।
ಕಟಾಕ್ಷ–ವ್ಯಾಕ್ಷೇಪ–ಕ್ಷಣಜನಿತ–ಸಂಕ್ಷೋಭ ನಿವಹಾಃ॥
ಭವಂತು ತ್ವಂಗಂತೋ ಹರಶಿರಸಿ ಗಂಗಾತನುಭುವಃ।
ತರಂಗಾಃ ಪ್ರೋತ್ತುಂಗಾ ದುರಿತಭವ ಭಂಗಾಯ ಭವತಾಮ್॥

4)
ತವಾಲಂಬಾದಂಬ! ಸ್ಫುರದಲಘುಗರ್ವೇಣ ಸಹಸಾ।
ಮಯಾ ಸರ್ವೇಽ ವಜ್ಞಾಸರಣಿಮಥ ನೀತಾಃ ಸುರಗಣಾಃ॥
ಇದಾನೀಮೌದಾಸ್ಯಂ ಭಜಸಿ ಯದಿ ಭಾಗೀರಥಿ ತದಾ।
ನಿರಾಧಾರೋ ಹಾಽಽರೋದಿಮಿ ಕಥಯ ಕೇಷಾಮಿಹ ಪುರಃ॥

5)
ಸ್ಮೃತಿಂ ಯಾತಾ ಪುಂಸಾಮಕೃತಸುಕೃತಾನಾಮಪಿ ಚ ಯಾ।
ಹರತ್ಯಂತಸ್ತಂದ್ರಾಂ ತಿಮಿರಮಿವ ಚಂಡಾಂಶು–ಸರಣಿಃ॥
ಇಯಂ ಸಾ ತೇ ಮೂರ್ತಿಃ ಸಕಲ–ಸುರ–ಸಂಸೇವ್ಯ–ಸಲಿಲಾ।
ಮಮಾಂತಃ ಸಂತಾಪಂ ತ್ರಿವಿಧಮಪಿ ಪಾಪಂ ಚ ಹರತಾಮ್॥

# ಕನ್ನಡ ಗಂಗಾಲಹರಿ

1)
ಜಗದ ಭಾಗ್ಯ ಜನಕೆಲ್ಲ ಭೋಗ್ಯ ಸೌಭಾಗ್ಯ ಪೂರ್ಣ ಸಿರಿಯು
ಲೀಲೆಯಿಂದ ಜಗಜನಿಪ ಶಿವನ ಐಸಿರಿಯು ದಿವ್ಯ ತೊರೆಯು।
ವೇದಸಾರ ಸರ್ವಸ್ವ ದೇವಕುಲ ಪುಣ್ಯ ಮೂರ್ತಿಮಂತ
ಅಮೃತಕಾಂತಿ ಸವಿ ಸಲಿಲ ಸವೆಸಲಿದು ಅಶುಭಗಳನನಂತ॥

2)
ಅಮ್ಮ ಒಮ್ಮೆ ತಮ್ಮಡಿಯ ಕಂಡ ಪಾಖಂಡಿ ಪಾಪಿ ಬಡವ।
ದುರಿತ ಕಳೆದು ದಾರಿದ್ರ್ಯ ತೊಳೆದು ದುರದೃಷ್ಟವಳಿದುಬಿಡುವ॥
ಒಡನೆ ಬಿಡದೆ ಅಜ್ಞಾನಗಿಡವ ಕಡಿದೊಗೆದು ತಿಳಿವು ಕೊಡುವ।
ಹರಿವ ನಿಮ್ಮ ಸಲಿಲ ಪ್ರವಾಹ ಕರುಣಿಸಲಿ ಎಮಗೆ ಶುಭವ॥

3)
ಈರ್ಷೆಗೊಂಡ ಪಾರ್ವತಿಯ ಬೆಳಗು ಮಾರ್ತಂಡ ರಾಗಚಂಡ
ಕೆಂಡ ಕುಂಡ ಕೆಂಗಣ್ಣು ತಾಕೆ ಖಳಖಳಿಪ ದಿವ್ಯ ಹೊಂಡ॥
ಹರನ ಶಿರದಿ ಮೊರೆಮೊರೆದು ಮೆರೆದು ನೊರೆ ನೆರೆದು ನೆರೆಯನೊರೆವ
ತಾರೆಯೂರತೊರೆ ತೆರೆಗಳಳಿಸಲೆಮ್ಮೆಲ್ಲ ದುರಿತ ಭರವ॥

4)
ಅಂಬೆ! ನಿನ್ನ ಆಲಂಬ ನಂಬಿ ನಾನುಬ್ಬಿ ಕೊಬ್ಬಿ ಸೊಕ್ಕಿ
ಲೆಕ್ಕವಿಲದ ಸುರಗಣವ ಹಳಿದೆ ಲೆಕ್ಕಿಸದೆ ಗರುವವುಕ್ಕಿ॥
ಇಂದು ತಾಯೆ ! ನೀನೆನ್ನ ತೊರೆಯೆ ಸುರತೊರೆಯೆ ಮಗುವ ಮರೆಯೆ
ದೀನ ನಾನು ಗತಿಹೀನನಕಟ ಆರೆದುರು ಅಳಲಿ ಪೊರೆಯೆ॥

5)
ರವಿಯ ಛವಿಯು ಬುವಿ ದಿವಿಯ ಕವಿದ ಕತ್ತಲೆಯ ಕಳೆವ ತೆರದಿ
ನೆನೆವ ನೀಚ ಜನ ಮನದಿ ನೆಲೆಸಿದಜ್ಞಾನ ತಮವ ಹರಿದ॥
ಸಕಲ ದೇವಕುಲ ಸೇವೆಗೊಂಬ ಜಗಕಾವ ನೀರರೂಪ
ಎನ್ನ ಹೃದಯ ಸಂತಾಪ ಕಳೆಯಲಿದು ಮೂರು ವಿಧತಾ ಪಾಪ॥

6)
ಅಪಿ ಪ್ರಾಜ್ಯಂ ರಾಜ್ಯಂ ತೃಣಮಿವ ಪರಿತ್ಯಜ್ಯ ಸಹಸಾ।
ವಿಲೋಲದ್ವಾನೀರಂ ತವ ಜನನಿ ತೀರಂ ಶ್ರಿತವತಾಮ್॥
ಸುಧಾತಃ ಸ್ವಾದೀಯಃ ಸಲಿಲಭರಮಾತೃಪ್ತಿ ಪಿಬತಾಮ್।
ಜನಾನಾಮ್ ಆನಂದಃ ಪರಿಹಸತಿ ನಿರ್ವಾಣಪದವೀಮ್॥

7)
ಪ್ರಭಾತೇ ಸ್ನಾಂತೀನಾಂ ನೃಪತಿ–ರಮಣೀನಾಂ ಕುಚತಟೀ।
ಗತೋ ಯಾವನ್ ಮಾತರ್ ಮಿಲತಿ ತವ ತೋಯೈರ್ಮೃಗಮದಃ॥
ಮೃಗಾಸ್ತಾವದ್ ವೈಮಾನಿಕ ಶತಸಹಸ್ರೈಃ ಪರಿವೃತಾಃ।
ವಿಶಂತಿ ಸ್ವಚ್ಛಂದಂ ವಿಮಲವಪುಷೋ ನಂದನವನಮ್॥

8)
ಸ್ಮೃತಂ ಸದ್ಯಃ ಸ್ವಾಂತಂ ವಿರಚಯತಿ ಶಾಂತಂ ಸಕೃದಪಿ ।
ಪ್ರಗೀತಂ ಯತ್ ಪಾಪಂ ಝುಟಿತಿ ಭವತಾಪಂ ಚ ಹರತಿ॥
ಇದಂ ತದ್ 'ಗಂಗೇತಿ' ಶ್ರವಣರಮಣೀಯಂ ಖಲು ಪದಂ।
ಮಮ ಪ್ರಾಣ–ಪ್ರಾಂತರ್ವದನ ಕಮಲಾಂತರ್ವಿಲಸತು॥

9)
ಯದಂತಃ ಖೇಲಂತೋ ಬಹುಲತರ ಸಂತೋಷ ಭರಿತಾಃ।
ನ ಕಾಕಾ ನಾಕಾಧೀಶ್ವರ ನಗರ ಸಾಕಾಂಕ್ಷಮನಸಃ।
ನಿವಾಸಾಲ್ಲೋಕಾನಾಂ ಜನಿಮರಣ ಶೋಕಾಪಹರಣಂ।
ತದೇತತ್ತೇ ತೀರಂ ಶ್ರಮಶಮನಧೀರಂ ಭವತು ನಃ॥

10)
ನ ಯತ್ ಸಾಕ್ಷಾದ್ ವೇದೈರಪಿ ಗಲಿತಭೇದೈರವಸಿತಂ।
ನ ಯಸ್ಮಿನ್ ಜೀವಾನಾಂ ಪ್ರಸರತಿ ಮನೋವಾಗವಸರಃ॥
ನಿರಾಕಾರಂ ನಿತ್ಯಂ ನಿಜಮಹಿಮ ನಿರ್ವಾಸಿತ ತಮೊ।
ವಿಶುದ್ಧಂ ಯತ್ ತತ್ವಂ ಸುರತಟಿನಿ! ತತ್ತ್ವಂ ನ ವಿಷಯಃ॥

6)
ಮನೆಯ ಮರೆದು ಸಾಮ್ರಾಜ್ಯ ತೊರೆದು ತೃಣವೆಂದು ಹಣವ ಜರೆದು
ಜೇಕು ಜಾಲ ಜೋಕಾಲಿ ಜೀಕು ಜಲ ತೊಳೆದ ತೀರಸೊರೆದು॥
ಅಮೃತಕಿಂತ ಸವಿ ಅಂಬು ಅಂಬೆ! ತವ ಬೊಗಸೆ ತುಂಬ ಕುಡಿಯೆ
ಜನರಿಗಾಗುವಾನಂದದೆದುರು ನಿಜ ಮೋಕ್ಷ-ಸುಖವು ಕಡೆಯೇ॥

7)
ಅರುಣ ಉದಿಸೆ ಮೈ ತೊಳೆವ ತರುಣ ರಾಜನ್ಯ-ರಸಿಕ-ರಮಣಿ
ನೀರು ಸಾರೆ ಕತ್ತುರಿಯು ಜಾರೆ ಕುಚವೇರೆ ತುಂತುರ-ಮಣಿ॥
ಪುಣ್ಯ ಚಿಗುರಿ ಮೈನಿಮಿರಿ ಚಿಗರೆ ಸುರಪುರಿ ವಿಮಾನವೇರಿ
ಸಗ್ಗ ಸೇರಿ ನಂದನವ ಸಾರಿ ವಿಹರಿಪುವು ಸುರಶರೀರಿ॥

8)
ನೆನೆಯೆ ಚಿಂತೆ-ವಿಭ್ರಾಂತ-ಚಿತ್ತ-ಚಿರಶಾಂತಿ ಸಂತಸೆರೆವ
ಒಮ್ಮೆ ಹಾಡೆ ಭವ ತಾಪ ಪಾಪಗಳ ಲೇಪ ಲೋಪ ತರುವ
ಮಂಗಳಾಂಗಿ ನಿನ "ಗಂಗೆ" ಎಂಬ ಕಿವಿ-ತುಂಬು ಹೆಸರು ಅಂಬೆ!
ಎನ್ನ ಮುಖದ ರಾಜೀವ-ಜೀವ ಭಾವದಲಿ ಮೊಳಗಲೆಂಬೆ॥

9)
ಯಾವ ತೀರ ತರು ತಿಳ್ಳಿಯಾಡಿ ತೆರೆ ತೊಟ್ಟಿಲಾಗಿ ತೂಗಿ
ಕಾಗೆ ಇಂದ್ರಪುರಿ-ಸುಖ-ವಿರಾಗಿ ತಾನಾಗಿ ತೀರ್ಥಯೋಗಿ॥
ಇಂಥ ದಡದಿ ನಿಂತಂಥಸಂತ ಜನುಜನುಮ ದುಃಖಜಾಲ
ಕಡಿದುಬಿಡುವ ತಮ್ಮಡಿಯು ತಡಿಯು ತುಡವರಿಸಲಾರ್ತಿಮೂಲ॥

10)
ವಾದ ಭೇದವಿರದಿದ್ದ ವೇದಗಳ ಓದಿ ತಿಳಿಯದಂಥ
ಜೀವ ಭಾವ ಅನುಭಾವ ಅರಿಯದಿಹ ಮನಕೆ ಹೊಳೆಯದಂಥ॥
ನಿರ್ವಿಕಾರ ಆಕಾರ ರಹಿತ, ಮಮಕಾರ ಅಂಧಕಾರ
ಹರಿವ ಪೊರೆವ ಹರಿತತ್ತ್ವ ತೆರೆದೆ ನೀ ಮತಿಗೆ ಮಿತಿಗೆ ದೂರ॥

11)
ಮಹಾದಾನೈರ್ಧ್ಯಾನೈರ್ಬಹುವಿಧ-ವಿತಾನೈರಪಿ ಚ ಯತ್।
ನ ಲಭ್ಯಂ ಘೋರಾಭಿಃ ಸುವಿಮಲ ತಪೋರಾಶಿಭಿರಪಿ॥
ಅಚಿಂತ್ಯಂ ತದ್ ವಿಷ್ಣೋಃ ಪದಮಖಿಲಸಾಧಾರಣತಯಾ।
ದದಾನಾ ಕೇನಾಸಿ ತ್ವಮಿಹ ತುಲನೀಯಾ ಕಥಯ ನಃ॥

12)
ನೃಣಾಮೀಕ್ಷಾಮಾತ್ರಾದಪಿ ಪರಿಹರಂತ್ಯಾ ಭವಭಯಂ।
ಶಿವಾಯಾಸ್ತೇ ಮೂರ್ತೇಃ ಕ ಇಹ ಮಹಿಮಾನಂ ನಿಗದತು॥
ಅಮರ್ಷಮ್ಲಾನಾಯಾಃ ಪರಮಮನುರೋಧಂ ಗಿರಿಭುವೊ।
ವಿಹಾಯ ಶ್ರೀಕಂಠಃ ಶಿರಸಿ ನಿಯತಂ ಧಾರಯತಿ ಯಾಂ॥

13)
ವಿನಿಂದ್ಯಾನ್ಯುನ್ಮತ್ತೈರಪಿ ಚ ಪರಿಹಾರ್ಯಾಣಿ ಪತಿತೈಃ।
ಅವಾಚ್ಯಾನಿ ವ್ರಾತ್ಯೈಃ ಸಪುಲಕಮಪಾಸ್ಯಾನಿ ಪಿಶುನೈಃ॥
ಹರಂತೀ ಲೋಕಾನಾಂ ಅನವರತಮೇನಾಂಸಿ ಕಿಯತಾಮ್।
ಕದಾಪ್ಯಶ್ರಾಂತಾ ತ್ವಂ ಜಗತಿ ಪುನರೇಕಾ ವಿಜಯಸೇ॥

14)
ಸ್ಖಲಂತೀ ಸ್ವರ್ಲೋಕಾದ್ ಅವನಿತಲ ಶೋಕಾಪಹೃತಯೇ।
ಜಟಾಜೂಟ ಗ್ರಂಥೌ ಯದಸಿ ವಿನಿಬದ್ಧಾ ಪುರಭಿದಾ॥
ಅಯೇ! ನಿರ್ಲೋಭಾನಾಮಪಿ ಮನಸಿ ಲೋಭಂ ಜನಯತಾಂ।
ಗುಣಾನಾಮೇವಾಯಂ ತವ ಜನನಿ ದೋಷಃ ಪರಿಣತಃ॥

15)
ಜಡಾನ್ ಅಂಧಾನ್ ಪಂಗೂನ್ ಪ್ರಕೃತಿ ಬಧಿರಾನ್ ಉಕ್ತಿವಿಕಲಾನ್।
ಗ್ರಹಗ್ರಸ್ತಾನ್ ಅಸ್ತಾಖಿಲದುರಿತನಿಸ್ತಾರ ಸರಣೀನ್॥
ನಿಲಿಂಪೈರ್ನಿರ್ಮುಕ್ತಾನಪಿ ಚ ನಿರಯಾಂತರ್ನಿಪತತೋ।
ನರಾನಂಬ! ತ್ರಾತುಂ ತ್ವಮಿಹ ಪರಮಂ ಭೇಷಜಮಸಿ॥

11)
ಧ್ಯಾನ–ದಾನ–ಹರಿಗಾನ–ಮನನ–ಪೂಜನಕೆ ಭಜನ–ಯಜನ–
ಜಪಕೆ ಹತ್ತು ತಪ ತಪಕೆ ಸಿಗದ ಪದವಿತ್ತು ಸರ್ವಸೃಜನ॥
ನೀರಗುಂಟ ವೈಕುಂಠಕೆಲ್ಲ ಉತ್ಕಂಠಿ ತುಂಟ ಶುಂಠ–
ರೊಯ್ಯಬಲ್ಲ ನಿನಗಿಲ್ಲಿ ಇಲ್ಲ ದೃಷ್ಟಾಂತ ಕವಿಯೆ ಕುಂಠ॥

12)
ನೋಟದಿಂದ ಸಂಸಾರತಾಪ ಪರಿಹರಿಸಿ ಜನರ ಹರಿಸಿ
ಪೊರೆವ ನಿನ್ನ ನರನೆಂತು ಮಹಿಮೆ ಪೊಗಳುವನು ಈಶನರಸಿ॥
ರೋಷ ತುಂಬಿದಂಬಿಕೆಯ ಮನವ ರಂಬಿಸುವುದನ್ನು ಬಿಟ್ಟು
ಅವಳ ಗಂಡ ನಂಜುಂಡ ನಲಿವ ತಲೆಮೇಲೆ ನಿನ್ನನಿಟ್ಟು॥

13)
ನೀಚ ನಡುಗಿ ಉಚ್ಚರಿಸೆ ನಾಚಿ ಆಚರಿಸಲಂಜಿಬಿಟ್ಟ
ಪಾಪಿ ತೆಗಳಿ ಪಾತಕಿಯು ಉಗುಳಿ ಘಾತಕಿಯು ಭಯವ ಪಟ್ಟ॥
ಕ್ರೂರ ಹಳಿದ ಹೀಗಳೆದ ಜನರ ಘನಘೋರ ಪಾಪಬೆಟ್ಟ
ಕ್ಲೇಶವಿಲ್ದೆ ಕರಗಿಸುವ ನಿನಗೆ ಪಾವನತೆ ವಿಜಯ ಪಟ್ಟ॥

14)
ಕೆಳಗೆ ಬಿದ್ದ ಭವ ಬದ್ಧ ಜನರನುದ್ಧರಿಸಲೆಂದು ನೀನು
ಇಳೆಗೆ ಇಳೆಯೆ ಹರ–ಜುಟ್ಟ–ಹುಟ್ಟಿನಲಿ ಕಟ್ಟಿದಮರ ಜೇನು॥
ಆಶೆ ತೊರೆದ ಮುನಿ ಮನದಿ ನಿನ್ನ ಹಿಡಿದಿಡುವ ಆಶೆಯುಂಟು–
ಮಾಳ್ಪ ನಿನ್ನ ಗುಣ ದೋಷವಾಯ್ತು ಶಿವ–ತಲೆಗೆ ಬ್ರಹ್ಮಗಂಟು॥

15)
ಕಿವುಡ–ಕುರುಡ–ಮತಿಮದಡ–ಕುಂಟ–ಜಡ–ಎಬಡ–ಅಗಡವಿಗಡ
ಮೂಕ–ಗಾಳಿಗ್ರಹಚಾರ ಶೋಕಿಪಾನೇಕ ಏಡಮಾಡ॥
ಮಾರ್ಗ ತೋರದಮರಾಲಿ ತೊರೆದ ನರಕದಲಿ ಜರಿದು ಸರಿದೇ–
ಬಿದ್ದ ಎಲ್ಲರುದ್ಧರಿಸೆ ಸಿದ್ಧ ಸವಿಮದ್ದು ಅಮೃತ ಸರಿದೇ॥

16)
ಸ್ವಭಾವ ಸ್ವಚ್ಛಾನಾಂ ಸಹಜ ಶಿಶಿರಾಣಾಮಯಮಪಾಂ।
ಅಪಾರಸ್ತೇ ಮಾತರ್ಜಯತಿ ಮಹಿಮಾ ಕೋಽಪಿ ಜಗತಿ॥
ಮುದಾ ಯಂ ಗಾಯಂತಿ ದ್ಯುತಲಮನವದ್ಯದ್ಯುತಿಭೃತಃ।
ಸಮಾಸಾದಾದ್ಯಾಪಿ ಸ್ಫುಟಪುಲಕಸಾಂದ್ರಾಃ ಸಗರಜಾಃ॥

17)
ಕೃತಕ್ಷುದ್ರೈನಸ್ಕಾನಥ ಝುಟಿತಿ ಸಂತಪ್ತಮನಸಃ।
ಸಮುದ್ಧರ್ತುಂ ಸಂತಿ ತ್ರಿಭುವನತಲೇ ತೀರ್ಥನಿವಹಾಃ॥
ಅಪಿ ಪ್ರಾಯಶ್ಚಿತ್ತ ಪ್ರಸರಣ ಪಥಾತೀತ ಚರಿತಾನ್।
ನರಾನ್ ಊರೀಕರ್ತುಂ ತ್ವಮಿವ ಜನನಿ ತ್ವಂ ವಿಜಯಸೇ॥

18)
ನಿದಾನಂ ಧರ್ಮಾಣಾಂ ಕಿಮಪಿ ಚ ವಿಧಾನಂ ನವಮುದಾಂ।
ಪ್ರಧಾನಂ ತೀರ್ಥಾನಾಂ ಅಮಲಪರಿಧಾನಂ ತ್ರಿಜಗತಃ॥
ಸಮಾಧಾನಂ ಬುದ್ಧೇರಥ ಖಲು ತಿರೋಧಾನಮಧಿಯಾಂ।
ಶ್ರಿಯಾಮಾಧಾನಂ ನಃ ಪರಿಹರತು ತಾಪಂ ತವ ವಪುಃ॥

19)
ಪುರೋ ಧಾವಂ ಧಾವಂ ದ್ರವಿಣ–ಮದಿರಾ–ಘೂರ್ಣಿತ–ದೃಶಾಂ।
ಮಹೀಪಾನಾಂ ನಾನಾ–ತರುಣ ತರ–ಖೇದಸ್ಯ ನಿಯತಮ್॥
ಮಮೈವಾಯಂ ಮಂತುಃ ಸ್ವಹಿತಶತಹಂತುಃ ಜಡಧಿಯಃ।
ವಿಯೋಗಸ್ತೇ ಮಾತರ್ಯದಿಹ ಕರುಣಾತಃ ಕ್ಷಣಮಪಿ॥

20)
ಮರುಲ್ಲೀಲಾ ಲೋಲಲ್ ಲಹರಿ ಲುಲಿತಾಂಭೋಜ ಪಟಲೀ।
ಸ್ಖಲತ್ ಪಾಂಸು ವ್ರಾತಚ್ಛುರಣ ವಿಸರತ್ ಕೌಂಕುಮ ರುಚಿ॥
ಸುರಸ್ತ್ರೀ–ವಕ್ಷೋಜ–ಕ್ಷರದಗರು–ಜಂಬಾಲ–ಜಟಿಲಂ।
ಜಲಂ ತೇ ಜಂಬಾಲಂ ಮಮ ಜನನ ಜಾಲಂ ಜರಯತು ॥

16)
ಸೊದೆಯ ಸೊಂಪು ಕತ್ತುರಿಯ ಕಂಪು ಜಲಸಹಜ ತಂಪು ಇಂಪು
ರುಚಿರ ರುಚಿಯು ಸವಿ ಶುಚಿಯು ಗೆಲ್ಗೆ ತವ ತಾಯೆ ತೋಯ ಪೆಂಪು॥
ಅದುವೆ ಸೋಕಿ ಸಗರಜರು ಬೂದಿ ಮಂತ್ರಿಸಿದ ತೆರದಿ ದಿವ್ಯ
ದೇಹ ಪುಳಕಿ ಆನಂದ ತುಳುಕಿ ಪಾಡುವರು 'ಗಂಗೆಕಾವ್ಯ'॥

17)
ಕ್ಷುದ್ರ-ಪಾಪ ದಾರಿದ್ರ್ಯ-ತಾಪ ಕಳೆಯಲ್ಕೆ ನೈಕತೀರ್ಥ
ದುಃಖಹರಿಸಿ ಪರಿಶುದ್ಧಿ ಕರಿಸಿ ಉದ್ಧರಿಸಲಿವೆ ಸಮರ್ಥ॥
ಕೃಚ್ಛ್ರ-ಪ್ರಭೃತಿ-ಪರಿಹಾರ-ಮೀರಿದತಿ-ಘೋರ ಪಾಪ-ಪ್ರಶಮ
ಮಾಡಿ ನರರನುದ್ಧರಿಸುವಲ್ಲಿ ನಿಜ ನಿನಗೆ ನೀನೆ ಉಪಮ॥

18)
ಧರ್ಮಹೇತು,ಸಂಸಾರಸೇತು,ಆನಂದದಾತು,ಪ್ರೀತ-
ತೀರ್ಥಕ್ಷೇತ್ರ ಜಯಕೇತು ಶ್ವೇತಪಟ ಜಗದ ಪುಣ್ಯನೂತ॥
ಜಗದ ಜೀವ-ಜೀವಾತು, ನರರ ಅಜ್ಞಾನ ಧೂಮಕೇತು
ಸಿರಿಯ ದಾತೆ ಹಿರಿಮಾತೆ ನಿನ್ನ ರಸರೂಪ ನಮ್ಮ ಪಾತು॥

19)
ಸಿರಿಯ ಸೆರೆಯ ಮದ 'ದುಂಧ'ಅಂಧ ನೃಪರೆದುರು ಓಡಿ ಓಡಿ
ಮಣಿದು ನಿತ್ರಾಣ ಪ್ರಾಣ ನಾ ಬಿದ್ದೆ ಬುದ್ಧಿಗೇಡಿ॥
ನಿನ್ನ ಚಣವ ಬಿಟ್ಟಲೆದು ಬನ್ನಬಟ್ಟದ್ದು ಎನ್ನ ತಪ್ಪು
ಕಂದನೆಂದು ದಯೆಸಿಂಧು ಇಂದು ನೀನಪ್ಪಿಕೊಳ್ಳೆ ಒಪ್ಪು॥

20
ಗಾಳಿಲೀಲೆ-ಲೋಲಲೆಯ-ಲಹರಿಯುಯ್ಯಾಲೆ-ಲಾಲಿ-ಲುಲಿತ
ಕಮಲ-ಗಲಿತ ಕಿಂಜಲ್ಕ-ಮಿಲಿತ ಕುಂಕುಮದ ಕಾಂತಿ ಕಲಿತ॥
ಇಂದ್ರನೂರ ಸುಂದರಿಯ ವೃಂದ ಎದೆಗಂಧ ಚಂದನಗರು
ಕೂಡಿ ರಮ್ಯ ರಸರಾಡಿ ಕಳೆಯಲೆಮ್ಮೆಲ್ಲ ಬಾಳಿನೊಗರು॥

21
ಸಮುತ್ಪತ್ತಿಃ ಪದ್ಮಾ-ರಮಣ-ಪದ-ಪದ್ಮಾಮಲ-ನಖಾತ್।
ನಿವಾಸಃ ಕಂದರ್ಪ-ಪ್ರತಿಭಟ-ಜಟಾಜೂಟ-ಭವನೇ॥
ಅಥಾಯಂ ವ್ಯಾಸಂಗೋ ಹತ-ಪತಿತ ನಿಸ್ತಾರಣ ವಿಧೌ।
ನ ಕಸ್ಮಾದುತ್ಕರ್ಷಃ ತವ ಜನನಿ ಜಾಗರ್ತಿ ಜಗತಿ॥

22
ನಗೇಭ್ಯೋ ಯಾಂತೀನಾಂ ಕಥಯ ತಟಿನೀನಾಂ ಕತಮಯಾ।
ಪುರಾಣಾಂ ಸಂಹರ್ತುಃ ಸುರಧುನಿ! ಕಪರ್ದೋಽಧಿರುರುಹೆ॥
ಕಯಾ ವಾ ಶ್ರೀ ಭರ್ತುಃ ಪದಕಮಲಮಕ್ಷಾಲಿ ಸಲಿಲೈಃ।
ತುಲಾಲೇಶೋ ಯಸ್ಯಾಂ ತವ ಜನನಿ ದೀಯೇತ ಕವಿಭಿಃ॥

23
ವಿಧತ್ತಾಂ ನಿಃಶಂಕಂ ನಿರವಧಿಸಮಾಧಿಂ ವಿಧಿರಹೋ।
ಸುಖಂ ಶೇಷೇ ಶೇತಾಂ ಹರಿರವಿರತಂ ನೃತ್ಯತು ಹರಃ॥
ಕೃತಂ ಪ್ರಾಯಶ್ಚಿತ್ತೈರಲಮಥ ತಪೋದಾನಯಜನೈಃ।
ಸವಿತ್ರೀ ಕಾಮಾನಾಂ ಯದಿ ಜಗತಿ ಜಾಗರ್ತಿ ಭವತೀ॥

24
ಅನಾಥಃ ಸ್ನೇಹಾರ್ದ್ರಾಂ ವಿಗಲಿತಗತಿಃ ಪುಣ್ಯಗತಿದಾಂ।
ಪತನ್ ವಿಶ್ವೋದ್ಧರ್ತ್ರೀಂ ಗದವಿದಲಿತಃ ಸಿದ್ಧಭಿಷಜಮ್॥
ಸುಧಾಸಿಂಧುಂ ತೃಷ್ಣಾಕುಲಿತ ಹೃದಯೋ ಮಾತರಮಯಂ।
ಶಿಶುಃ ಸಂಪ್ರಾಪ್ತಸ್ತ್ವಾಮಹಮಿಹ ವಿದಧ್ಯಾಃ ಸಮುಚಿತಮ್॥

25
ವಿಲೀನೋ ವೈ ವೈವಸ್ವತ-ನಗರ-ಕೋಲಾಹಲ-ಭರಃ।
ಗತಾ ದೂತಾ ದೂರಂ ಕ್ವಚಿದಪಿ ಪರೇತಾನ್ ಮೃಗಯಿತುಂ॥
ವಿಮಾನಾನಾಂ ವ್ರಾತೋ ವಿದಲಯತಿ ವೀಥೀರ್ದಿವಿಷದಾಂ।
ಕಥಾ ತೇ ಕಲ್ಯಾಣಿ! ಯದವಧಿ ಮಹೀಮಂಡಲಮಗಾತ್॥

21)
ನಿನ್ನ ಜನುಮ, ಪದುಮೇಶನಮಲ-ಪದ-ಪದುಮದುಗುರಿನಿಂದ,
ವಾಸ ಮದನಮದ ಮುಕ್ಕುಗಣ್ಣ ಮುಕ್ಕಣ್ಣ ಮುಡಿಯ ಬಂಧ॥
ದಲಿತ ಗಲಿತ ವಿಸ್ಖಲಿತ ಪತಿತರುದ್ಧರಿಪ ವ್ಯಸನ ಬೇರೆ
ಅಂದ ಬಳಿಕ ಉತ್ಕರ್ಷ ನಿನ್ನದೇಕಾಗಬೇಡ ನೀರೆ॥

22)
ಬೆಟ್ಟ ತುಟ್ಟ ತುದಿಯಲ್ಲಿ ಹುಟ್ಟಿ ಹರಿಯುವವು ಎಷ್ಟೋ ಸುನದಿ!
ಅಲ್ಲಿ ಶಿವನ ಶಿರದಟ್ಟ ಮುಟ್ಟಿ ಮೆರೆದಿರುವವೆಷ್ಟು ಜಗದಿ?॥
ಹರಿಯ ಪಾದತಳ ತೊಳೆದು ತೀರ್ಥಪಾವಿತ್ರ್ಯ ಪಡೆದರಾರು?
ಯಾರಿಗೆಂದು ಹೋಲಿಸಲಿ ನಿನ್ನ ಕವಿವಾಣಿ ಜಾಣಿ ತೋರು॥

23)
ಹರನು ನಲಿದು ನರ್ತಿಸಲಿ, ಬೊಮ್ಮ ವರ್ತಿಸಲಿ ಧ್ಯಾನವನ್ನು
ಹರಿಯು ಹಾವ ಹಾಸಿಗೆಯ ಮೇಲೆ ಹಾಽಯಾಗಿ ಮಲಗಲಿನ್ನು॥
ಸಾಕು ದಾನ ಮತ್ತೇಕೆ ಧರ್ಮ? ಜಗದಗಲ ಸುರಿದ ಜೇನು
ಬೇಡಿದೆಲ್ಲ ವರ ಕೊಡುವ ನೀನು ಬುವಿ ಇರಲು ಕಾಮಧೇನು॥

24)
ಪತಿತ ನಾನು ಪಾವನೆಯು ನೀನು, ಗತಿಗಾಣೆ ವಿಶ್ವತ್ರಾಣೇ,
ಕರುಣರಾಶಿ! ಪರದೇಶಿ ನಾನು, ನಾ ರೋಗಿ ರಾಮಬಾಣೇ॥
ಅಮೃತಸಿಂಧು! ನೀರಡಿಸಿ ನಿಂದೆ ನಿನ ಕಂದ ಬಂದೆ ತಾಯೇ!
ಕರುಳು ಬಂಧ ಸಂಬಂಧಕುಚಿತ ತೋರ್ದಂತೆ ಮಾಡಿ ಕಾಯೇ॥

25
ಸಾವಿನೂರ ಸಂತೆಯಲಿ ಸೊಲ್ಲು ಗುಲ್ಲಿಲ್ಲ ಎಲ್ಲ ಶಾಂತ
ಯಮನ ದೂತಗಣ ಹೆಣಗಳರಿಸಲೋಡಿದರು ದಿಗ್‌ದಿಗಂತ॥
ದೇವಪುರಿಯ ಹಿರಿದಾರಿ ಬಿರಿಯುತಿದೆ ಬಹು ವಿಮಾನ ಎರಗೆ
ಮಾತೆ! ನಿನ್ನ ಕತೆ ಮಹಿಮೆ ಮಾತು ಮೇದಿನಿಯಲಿರುವವರೆಗೆ॥

26)
ಸ್ಫುರತ್–ಕಾಮ–ಕ್ರೋಧ–ಪ್ರಬಲತರ–ಸಂಜಾತ–ಜಟಿಲ–
ಜ್ವರ–ಜ್ವಾಲಾ–ಜಾಲ–ಜ್ವಲಿತ–ವಪುಷಾಂ ನಃ ಪ್ರತಿದಿನಮ್॥
ಹರಂತಾಂ ಸಂತಾಪಂ ಕಮಪಿ ಮರುದುಲ್ಲಾಸ–ಲಹರೀ–।
ಛಟಾ–ಚಂಚತ್–ಪಾಥಃ ಕಣ–ಸರಣಯೋ ದಿವ್ಯಸರಿತಃ॥

27)
ಇದಂ ಹಿ ಬ್ರಹ್ಮಾಂಡಂ ಸಕಲ ಭುವನಾಭೋಗಭವನಂ।
ತರಂಗೈಃ ಯಸ್ಯಾಂತರ್ಲುಠತಿ ಪರಿತಃ ಕಂದುಕಮಿವ॥
ಸ ಏಷಃ ಶ್ರೀಕಂಠ–ಪ್ರವಿತತ–ಜಟಾ–ಜೂಟ–ಜಟಿಲಃ।
ಜಲಾನಾಂ ಸಂಘಾತಃ ತವ ಜನನಿ! ತಾಪಂ ಹರತು ನಃ॥

28)
ತ್ರಪಂತೇ ತೀರ್ಥಾಣಿ ತ್ವರಿತಮಿಹ ಯಸ್ಯೋದ್ಧೃತಿ ವಿಧೌ।
ಕರಂ ಕರ್ಣೇ ಕುರ್ವಂತ್ಯಪಿ ಕಿಲ ಕಪಾಲಿ ಪ್ರಭೃತಯಃ॥
ಅಮುಂ ತಂ ಮಾಮಂಬ! ತ್ವಮಿಯಮನುಕಂಪಾರ್ದ್ರಹೃದಯೇ।
ಪುನಾನಾ ಸರ್ವೇಷಾಮಘ–ದಮನ–ದರ್ಪಂ ದಲಯಸಿ॥

29)
ಶ್ವಪಾಕಾನಾಂ ವ್ರಾತ್ಯೈರಮಿತ–ವಿಚಿಕಿತ್ಸಾ–ವಿಚಲಿತೈಃ।
ವಿಮುಕ್ತಾನಾಮೇಕಂ ಕಿಲ ಸದನಮೇನಃಪರಿಷದಾಮ್॥
ಅಹೋ! ಮಾಮುದ್ಧರ್ತುಂಜನನಿ ಘಟಯಂತ್ಯಾಃ ಪರಿಕರಮ್।
ತವ ಶ್ಲಾಘಾಂ ಕರ್ತುಂ ಕಥಮಿವ ಸಮರ್ಥೋ ನರಪಶುಃ॥

30)
ನ ಕೋಽಪ್ಯೇತಾವಂತಂ ಖಲು ಸಮಯಮಾರಭ್ಯ ಮಿಲಿತೋ।
ಯದುದ್ಧಾರಾದಾರಾದ್ ಭವತಿ ಜಗತೋ ವಿಸ್ಮಯಭರಃ॥
ಇತೀಮಾಮೀಹಾಂ ತೇ ಮನಸಿ ಚಿರಕಾಲಂ ಸ್ಥಿತವತೀಮ್।
ಅಯಂ ಸಂಪ್ರಾಪ್ತೋಽಹಂ ಸಫಲಯಿತುಮಂಬ! ಪ್ರಣಯ ನಃ॥

26)
ಕಾಮ ಕ್ರೋಧ ಮದ ಘೋರ ಜ್ವರದ ಉರಿ ಬಡೆದು ಬೆಂದು ಬಂದು
ನೊಂದು ನಿಂದ ನಮ್ಮೆಲ್ಲ ತಾಪ ತೊಲಗಿಸಲಿ ಕರುಣಸಿಂಧು॥
ತಾರಕೇರಿ ತಡಸಲಿನ ತೀರ ತಿರುನೀರ ತೇರ ಸ್ವಾರ
ಗಾಳಿ ತೂರಿ ತೆರೆ ತುಂತುರೇರಿ ತಂಪೊಗೆವ ತವ ತುಷಾರ॥

27)
ಯಾವ ತೆರೆಯ ತಿರುಗಣಿಗೆ ಸಿಕ್ಕು ತಿರ್ರೆಂದು ತಿರುಗುತಿಹುದು
ದುಂಡು ತುಂಬಿ–ಫಲ ಚಂಡಿನಂತ ಬ್ರಹ್ಮಾಂಡ ತೋರುತಿಹುದು॥
ಕಳೆಯಲಿಂಥ ನದಿ ಪಾಚಿ–ಸಾಚಿ–ಚಲವೀಚಿ–ಚಾಚಿ ಬಾಚಿ
ಶಿವನ ಜಡೆಯ ಕಚ–ರಚಿತ ಚೂಡ–ನಿಚಿತಾಂಬು ಭವವಿಷೂಚಿ॥

28)
ನೀಚನನ್ನು ಶುಚಿಗೊಳಿಸೆ ನಾಚಿ ನಡುಗುವುವು ತೀರ್ಥಕ್ಷೇತ್ರ
ಶಂಭು ಪ್ರಭೃತಿಗಳು ಬೆರಳನಿಟ್ಟು ಮುಚ್ಚುವರು ಕರ್ಣ ನೇತ್ರ॥
ಇಂಥ ನನ್ನನುದ್ಧರಿಸೆ ನೀನು ಸದಯಾಂತರಂಗೆ ಗಂಗೆ
'ನಾವೆ ಲೋಕ ಪಾವನರು' ಎನುವ ಸುರ ಸರ್ವ ಗರ್ವ ಭಂಗೆ॥

29)
ಧರ್ಮಲಂಡ ಚಾಂಡಾಲ ಚಂಡಕೃತಿ ಮುಂಡಜಾತಿಯವರು
ಘೋರ ಹೇಯವೆಂದಂಜಿಬಿಟ್ಟ ಘನ ಪಾಪಕೆಲ್ಲ ತವರು॥
ಆದ ನನ್ನನುದ್ಧರಿಸಲೆದ್ದೆ ನೀ ಟೊಂಕ ಕಟ್ಟಿ ನಿಂತು
ಇಂಥ ನಿನ್ನ ಬಣ್ಣನೆಯ ಪುರುಷಪಶು ತಾಯೆ ಮಾಳ್ಪನೆಂತು॥

30)
ಯಾವ ಘೋರ ಪಾತಕಿಯ ನಾನು ಉದ್ಧರಿಸೆ ದಂಗುಬಡೆದು
ಜಗವೆ ಬೆಚ್ಚಿ ಅಚ್ಚರಿಗೆ ಬೆರಳು ಕಚ್ಚೀತು ಹುಚ್ಚು ಹಿಡಿದು॥
ಇಂಥ ಪಾಪಿ ಅದ್ಯಾಪಿ ನನಗೆ ಸಿಗನೆಂಬ ನಿನ್ನ ಚಿಂತೆ
ಕಳೆಯಲೆಂದೆ ನಾ ಬಂದೆ ಮೊರೆದು ತಣಿಸಾಸೆ ಏಕೆ ನಿಂತೆ?॥

26)
ಸ್ಫುರತ್–ಕಾಮ–ಕ್ರೋಧ–ಪ್ರಬಲತರ–ಸಂಜಾತ–ಜಟಿಲ–
ಜ್ವರ–ಜ್ವಾಲಾ–ಜಾಲ–ಜ್ವಲಿತ–ವಪುಷಾಂ ನಃ ಪ್ರತಿದಿನಮ್॥
ಹರಂತಾಂ ಸಂತಾಪಂ ಕಮಪಿ ಮರುದುಲ್ಲಾಸ–ಲಹರೀ–।
ಛಟಾ–ಚಂಚತ್–ಪಾಥಃ ಕಣ–ಸರಣಯೋ ದಿವ್ಯಸರಿತಃ॥

27)
ಇದಂ ಹಿ ಬ್ರಹ್ಮಾಂಡಂ ಸಕಲ ಭುವನಾಭೋಗಭವನಂ।
ತರಂಗೈಃ ಯಸ್ಯಾಂತರ್ಲುಠತಿ ಪರಿತಃ ಕಂದುಕಮಿವ॥
ಸ ಏಷಃ ಶ್ರೀಕಂಠ–ಪ್ರವಿತತ–ಜಟಾ–ಜೂಟ–ಜಟಿಲಃ।
ಜಲಾನಾಂ ಸಂಘಾತಃ ತವ ಜನನಿ! ತಾಪಂ ಹರತು ನಃ॥

28)
ತ್ರಪಂತೇ ತೀರ್ಥಾಣಿ ತ್ವರಿತಮಿಹ ಯಸ್ಯೋದ್ಧೃತಿ ವಿಧೌ।
ಕರಂ ಕರ್ಣೇ ಕುರ್ವಂತ್ಯಪಿ ಕಿಲ ಕಪಾಲಿ ಪ್ರಭೃತಯಃ॥
ಅಮುಂ ತಂ ಮಾಮಂಬ! ತ್ವಮಿಯಮನುಕಂಪಾರ್ದ್ರಹೃದಯೇ।
ಪುನಾನಾ ಸರ್ವೇಷಾಮಘ–ದಮನ–ದರ್ಪಂ ದಲಯಸಿ॥

29)
ಶ್ವಪಾಕಾನಾಂ ವ್ರಾತ್ಯೈರಮಿತ–ವಿಚಿಕಿತ್ಸಾ–ವಿಚಲಿತೈಃ।
ವಿಮುಕ್ತಾನಾಮೇಕಂ ಕಿಲ ಸದನಮೇನಃಪರಿಷದಾಮ್॥
ಅಹೋ! ಮಾಮುದ್ಧರ್ತುಂಜನನಿ ಘಟಯಂತ್ಯಾಃ ಪರಿಕರಮ್।
ತವ ಶ್ಲಾಘಾಂ ಕರ್ತುಂ ಕಥಮಿವ ಸಮರ್ಥೋ ನರಪಶುಃ॥

30)
ನ ಕೋಽಪ್ಯೇತಾವಂತಂ ಖಲು ಸಮಯಮಾರಭ್ಯ ಮಿಲಿತೋ।
ಯದುದ್ಧಾರಾದಾರಾದ್ ಭವತಿ ಜಗತೋ ವಿಸ್ಮಯಭರಃ॥
ಇತೀಮಾಮೀಹಾಂ ತೇ ಮನಸಿ ಚಿರಕಾಲಂ ಸ್ಥಿತವತೀಮ್।
ಅಯಂ ಸಂಪ್ರಾಪ್ತೋಽಹಂ ಸಫಲಯಿತುಮಂಬ! ಪ್ರಣಯ ನಃ॥

26)
ಕಾಮ ಕ್ರೋಧ ಮದ ಘೋರ ಜ್ವರದ ಉರಿ ಬಡೆದು ಬೆಂದು ಬಂದು
ನೊಂದು ನಿಂದ ನಮ್ಮೆಲ್ಲ ತಾಪ ತೊಲಗಿಸಲಿ ಕರುಣಸಿಂಧು॥
ತಾರಕೇರಿ ತಡಸಲಿನ ತೀರ ತಿರುನೀರ ತೇರ ಸ್ವಾರ
ಗಾಳಿ ತೂರಿ ತೆರೆ ತುಂತುರೇರಿ ತಂಪೊಗೆವ ತವ ತುಷಾರ॥

27)
ಯಾವ ತೆರೆಯ ತಿರುಗಣೆಗೆ ಸಿಕ್ಕು ತಿರ್ರೆಂದು ತಿರುಗುತಿಹುದು
ಮಂಡು ತುಂಬಿ-ಫಲ ಚಂಡಿನಂತ ಬ್ರಹ್ಮಾಂಡ ತೋರುತಿಹುದು॥
ಕಳೆಯಲಿಂಥ ನದಿ ಪಾಚಿ-ಸಾಚಿ-ಚಲವೀಚಿ-ಚಾಚಿ ಬಾಚಿ
ಶಿವನ ಜಡೆಯ ಕಚ-ರಚಿತ ಚೂಡ-ನಿಚಿತಾಂಬು ಭವವಿಷೂಚಿ॥

28)
ನೀಚನನ್ನು ಶುಚಿಗೊಳಿಸೆ ನಾಚಿ ನಡುಗುವುವು ತೀರ್ಥಕ್ಷೇತ್ರ
ಶಂಭು ಪ್ರಭೃತಿಗಳು ಬೆರಳನಿಟ್ಟು ಮುಚ್ಚುವರು ಕರ್ಣ ನೇತ್ರ॥
ಇಂಥ ನನ್ನನುದ್ಧರಿಸೆ ನೀನು ಸದಯಾಂತರಂಗೆ ಗಂಗೆ
'ನಾವೆ ಲೋಕ ಪಾವನರು' ಎನುವ ಸುರ ಸರ್ವ ಗರ್ವ ಭಂಗೆ॥

29)
ಧರ್ಮಲಂಡ ಚಾಂಡಾಲ ಚಂಡಕೃತಿ ಮುಂಡಜಾತಿಯವರು
ಘೋರ ಹೇಯವೆಂದಂಜಿಬಿಟ್ಟ ಘನ ಪಾಪಕೆಲ್ಲ ತವರು॥
ಆದ ನನ್ನನುದ್ಧರಿಸಲೆದ್ದೆ ನೀ ಟೊಂಕ ಕಟ್ಟಿ ನಿಂತು
ಇಂಥ ನಿನ್ನ ಬಣ್ಣನೆಯ ಪುರುಷಪಶು ತಾಯೆ ಮಾಳ್ಪನೆಂತು॥

30)
ಯಾವ ಘೋರ ಪಾತಕಿಯ ನಾನು ಉದ್ಧರಿಸೆ ದಂಗುಬಡೆದು
ಜಗವೆ ಬೆಚ್ಚಿ ಅಚ್ಚರಿಗೆ ಬೆರಳು ಕಚ್ಚೀತು ಹುಚ್ಚು ಹಿಡಿದು॥
ಇಂಥ ಪಾಪಿ ಅದ್ಯಾಪಿ ನನಗೆ ಸಿಗನೆಂಬ ನಿನ್ನ ಚಿಂತೆ
ಕಳೆಯಲೆಂದೆ ನಾ ಬಂದೆ ಪೊರೆದು ತಣಿಸಾಸೆ ಏಕೆ ನಿಂತೆ?॥

31)
ಶ್ವವೃತ್ತಿರ್ವ್ಯಾಸಂಗೋ ನಿಯತಮಥ ಮಿಥ್ಯಾಪ್ರಲಪನಂ।
ಕುತರ್ಕೇಷ್ವಭ್ಯಾಸಃ ಸತತ ಪರಪೈಶುನ್ಯ ಮನನಂ॥
ಅಪಿ ಶ್ರಾವಂ ಶ್ರಾವಂ ಮಮ ತು ಪುನರೇವಂಗುಣಗಣಾನ್।
ಋತೇ ತ್ವತ್ ಕೋ ನಾಮ ಕ್ಷಣಮಪಿ ನಿರೀಕ್ಷೇತ ವದನಮ್॥

32)
ವಿಶಾಲಾಭ್ಯಾಮಾಭ್ಯಾಂ ಕಿಮಿಹ ನಯನಾಭ್ಯಾಂ ಖಲು ಫಲಂ।
ನ ಯಾಭ್ಯಾಮಾಲೀಢಾ ಪರಮ ರಮಣೀಯಾ ತವ ತನುಃ॥
ಅಯಂ ಹಿ ನ್ಯಕ್ಕಾರೋ ಜನನಿ! ಮನುಜಸ್ಯ ಶ್ರವಣಯೋಃ।
ಯಯೋರ್ನಾಂತಂ ಯಾತಃ ತವ ಲಹರಿ–ಲೀಲಾ–ಕಲಕಲಃ॥

33)
ವಿಮಾನೈಃ ಸ್ವಚ್ಛಂದಂ ಸುರಪುರಮಯಂತೇ ಸುಕೃತಿನಃ।
ಪತಂತಿ ದ್ರಾಕ್ ಪಾಪಾ ಜನನಿ ನರಕಾಂತಃ ಪರವಶಾಃ॥
ವಿಭಾಗೋಽಯಂ ತಸ್ಮಿನ್ನಶುಭಮಯ ಮೂರ್ತೌ ಜನಪದೇ।
ನ ಯತ್ರ ತ್ವಲ್ಲೀಲಾ ದಲಿತ –ಮನುಜಾಶೇಷ–ಕಲುಷಾ॥

34)
ಅಪಿ ಘ್ನಂತೋ ವಿಪ್ರಾನವಿರತಮುಶಂತೋ ಗುರುಸತೀಃ।
ಪಿಬಂತೋ ಮೈರೇಯಂ ಪುನರಪಿ ಹರಂತಶ್ಚ ಕನಕಮ್॥
ವಿಹಾಯ ತ್ವಯ್ಯಂತೇ ತನುಮತನುದಾನಾಧ್ವರಜುಷಾಂ।
ಉಪರ್ಯಂಬ ಕ್ರೀಡಂತ್ಯಖಿಲ–ಸುರ–ಸಂಭಾವಿತ ಪದಾಃ॥

35)
ಅಲಭ್ಯಂ ಸೌರಭ್ಯಂ ಹರತಿ ಸತತಂ ಯಃ ಸುಮನಸಾಂ।
ಕ್ಷಣಾದೇವ ಪ್ರಾಣಾನಪಿ ವಿರಹ–ಶಸ್ತ್ರ–ಕ್ಷತ–ಹೃದಾಂ॥
ತ್ವದೀಯಾನಾಂ ಲೀಲಾ–ಚಲಿತ–ಲಹರೀಣಾಂ ವ್ಯತಿಕರಾತ್।
ಪುನೀತೇ ಸೋಽಪಿ ದ್ರಾಗಹಹ ಪವಮಾನಸ್ತ್ರಿಭುವನಮ್॥

31
ಸುಳ್ಳು, ಕಳ್ಳು, ಕೊಲೆ, ಕಳ್ಳಕೂಟ,ನಾಯ್ನಡತೆ,ಮಳ್ಳುಮಾಟ
ಶುಷ್ಕ ತರ್ಕ ಮತಿಮಂಗನಾಟ ನಾನಾದೆ ಜಗಕೆ ಕಾಟ॥
ಇಂಥ ನನ್ನ ಕಲ್ಯಾಣ ಕೋಟಿಗುಣ ಕೇಳಿ ಕೇಳಿ ಮುನ್ನ
ತಾಯೆ ನಿನ್ನ ಬಿಟ್ಟನ್ಯರೀಗ ಕಣ್ಣೆತ್ತಿ ನೋಡರೆನ್ನ॥

32
ನಿಮ್ಮ ರಮ್ಯ ರಸರೂಪ ಕಾಣದಿರೆ ವಿಫಲ ಬೊಗಸೆಯಗಲ
ಕೊಳದ ತಳದಿ ತಳತಳಿಪ ತುಂಬು ತಾವರೆಯ ನಯನಯುಗಲ॥
ಗಾಳಿ ಕೆರಳಿ ತೆರೆ ತೆರಳಿ ಹೊರಳಿ ದಡಕುರುಳಿ ಮರಳಿ ಬರಲು
ಲಹರಿ-ಲೀಲೆ-ಕಲಕಲವ ಕಿವಿಗೆ ಧಿಕ್ಕಾರ ಕೇಳದಿರಲು॥

33
ಸಗ್ಗ ನುಗ್ಗಿ ಸೊದೆಬುಗ್ಗೆಯೊಡೆದು ಹಿಗ್ಗುವರು ಸುಕೃತಿ ಕೆಲರು
ಪಾಪ-ಕೂಪ ಕಟು ಕುಂಭಿಪಾಕದಲಿ ಕುದಿವರಿತರ ಖಲರು॥
ಕಂಡುಬರುವುದಿದು ಅಶುಭದೇಶದಲಿ ಇಂಥ ಪಂಕ್ತಿಭೇದ
ಎಲ್ಲಿ ಕೇಳದಿದೆ ಮೃದು-ಮೃದಂಗ-ಗಂಗಾ-ತರಂಗ-ನಾದ॥

34
ಕಂಡ ದ್ವಿಜರ ತುಂಡರಿಪ ಪುಂಡ, ಪಾಖಂಡಿ, ಹೊನ್ನುಚೋರ,
ಹೆಂಡ ಕುಡಿವ,ಗುರುಹೆಂಡಿರೊಡನೆ ಭಂಡಾಟವಾಳ್ವ ಚಾರ॥
ನಿನ್ನ ಜಲದಿ ಜೀವನವ ನೀಗೆ ನಮಿಸುವರು ಸುರರು ಬಾಗಿ
ಯಾಗಿ-ಯೋಗಿಗಳಿಗಿಂತ ಮೇಲೆ ಸುಖಿಯಾಗಿ ಇಹರು ಭೋಗಿ॥

35
ಕಂಡ ಹೊಂಡ ಹೂಹಿಂಡು ಬಂಡು-ಭಂಡಾರ ಒಡೆವ ಚೋರ
ಚಣದಿ ವಿರಹ-ಗರ ಬಡೆದು ಕುಸಿವ ಜನರಸುವ ಕಸಿವ ಕ್ರೂರ॥
ಪವನ ಲೋಕಪಾವನವ ಗೈವ ತ್ರಿಭುವನದ ಜೀವನಾಗಿ
ಗಂಗೆ ನಿನ್ನ ತರಲತ್ತರಂಗ ಸಂಗಮಕೆ ಮಂಗಲಾಂಗಿ॥

36)
ಕಿಯಂತಃ ಸಂತ್ಯೇಕೇ ನಿಯತಮಿಹ ಲೋಕಾರ್ಥಘಟಕಾಃ।
ಪರೇ ಪೂತಾತ್ಮಾನಃ ಕತಿ ಚ ಪರಲೋಕ ಪ್ರಣಯಿನಃ॥
ಸುಖಂ ಶೇತೇ ಮಾತಸ್ತವ ಖಲು ಕೃಪಾತಃ ಪುನರಯಂ।
ಜಗನ್ನಾಥಃ ಶಶ್ವತ್ ತ್ವಯಿ ನಿಹಿತ–ಲೋಕ–ದ್ವಯ–ಭರಃ॥

37)
ಭವತ್ಯಾ ಹಿ ವ್ರಾತ್ಯಾಽಧಮ–ಪತಿತ–ಪಾಖಂಡ–ಪರಿಷತ್–
ಪರಿತ್ರಾಣ–ಸ್ನೇಹಃ ಶ್ಲಥಯಿತುಮಶಕ್ಯಃ ಖಲು ಯಥಾ॥
ಮಮಾಪ್ಯೇವಂ ಪ್ರೇಮಾ ದುರಿತ ನಿವಹೇಷ್ವಂಬ ಜಗತಿ।
ಸ್ವಭಾವೋಽಯಂ ಸರ್ವೈರಪಿ ಖಲು ಯತೋ ದುಷ್ಪರಿಹರಃ॥

38)
ಪ್ರದೋಷಾಂತರ್ನೃತ್ಯತ್–ಪುರಮಥನ–ಲೀಲೋದ್ಧೃತ–ಜಟಾ–
ತಟಾಭೋಗ–ಪ್ರೇಂಖಲ್ಲಹರಿ ಭುಜ–ಸಂತಾನ–ವಿಧೃತಿಃ॥
ಬಿಲ–ಕ್ರೋಡ–ಕ್ರೀಡಜ್ಜಲ–ಡಮರು–ಝಂಕಾರ–ಸುಭಗಃ।
ತಿರೋಧತ್ತಾಂ ತಾಪಂ ತ್ರಿದಶ–ತಟಿನೀ–ತಾಂಡವ–ವಿಧಿಃ॥

39)
ಸದೈವ ತ್ವಯ್ಯೇವಾರ್ಪಿತ–ಕುಶಲ ಚಿಂತಾ ಭರಮಿಮಂ।
ಯದಿ ತ್ವಂ ಮಾಮಂಬ ತ್ಯಜಸಿ ಸಮಯೇಽಸ್ಮಿನ್ ಸುವಿಷಮೇ॥
ತದಾ ವಿಶ್ವಾಸೋಽಯಂ ತ್ರಿಭುವನ ತಲಾದಸ್ತಮಯತೇ।
ನಿರಾಧಾರಾ ಚೇಯಂ ಭವತಿ ಖಲು ನಿರ್ವ್ಯಾಜಕರುಣಾ॥

40)
ಕಪರ್ದಾದುಲ್ಲಸ್ಯ ಪ್ರಣಯ–ಮಿಲದರ್ಧಾಂಗ–ಯುವತೇಃ।
ಪುರಾರೇಃ ಪ್ರೇಂಖಂತ್ಯೋ ಮೃದುಲ–ತರ–ಸೀಮಂತ–ಸರಣೌ॥
ಭವಾನ್ಯಾ ಸಾಪತ್ನ್ಯ–ಸ್ಫುರಿತ–ನಯನಂ ಕೋಮಲರುಚಾ।
ಕರೇಣಾಕ್ಷಿಪ್ತಾಸ್ತೇ ಜನನಿ ವಿಜಯಂತಾಂ ಲಹರಯಃ॥

36
ಸ್ವಾರ್ಥ ಸರಿಸಿ ಪರಹಿತಕೆ ತಮ್ಮ ತನು ಉರಿಸಿ ಹರಿಸಿ ಬೆವರು
ದುಡಿದು ಪಡೆವರಿಹ ಕೀರ್ತಿ ಜನರು ಅಪರತ್ರ ಮೋಕ್ಷ ತವರು॥
ನಾನು ಮಾತ್ರ ಜಗನ್ನಾಥ ನನ್ನ ದಯೆದಾಯಿ ಮೇಲೆ ಎಲ್ಲ
ಭಾರ ಹಾಕಿ ಹಾಂಯಾಗಿ ಮಲಗಿ ನಿದ್ರಿಸುವೆ ಚಿಂತೆ ಇಲ್ಲ॥

37
ತಾಯೆ ನೀನು ಏನಾದರೂನು ಬಿಡಲಾರೆ ಪಾಪಿ-ಪಿಶುನ,
ಕುಹಕ-ಕುಡುಕ-ತಲೆಗಡುಕ-ಕೆಡುಕರುದ್ಧರಿಪ ನಿನ್ನ ವ್ಯಸನ॥
ಹಾಗೆ ನಿತ್ಯ ದುಷ್ಕೃತ್ಯವೆಸಗುವಲ್ಲೆನಗೆ ಸಹಜ ಒಲವು
ಯಾರಿಗುಂಟು ಸಹಜ ಸ್ವಭಾವವನು ಮೀರಿ ನಿಲುವ ಬಲವು॥

38
ಸಂಜೆ ಕುಣಿವ ನಂಜುಡ ನೆಗಹಿ ಕೆಂಜಡೆಯ ಎತ್ತಿ ಹಿಡಿಯೆ
ಬೊರಲ ತರಲ ತೆರೆಮಾಲೆ ಲೋಲ ನೀಳ್ದೋಳ ಲೀಲೆ ಪಡೆಯೆ॥
ತಡಿಯ ತೊಡೆಯ ತೆರೆ-ತಾಡನೋತ್ಥ-ಬುಡುಬುಡಿಕೆ-ಮಧುರನಾದ
ಕಳೆಯಲಶುಭ ನೈಲಿಂಪ-ನದಿಯ ನಟಿ-ನಾಟ್ಯ-ನವ-ವಿನೋದ॥

39
ತಾಯೆ ನಿನ್ನ ತಲೆ ಮೇಲೆ ಹಾಕಿ ಎನ್ನೆಲ್ಲ ಪೊರೆವ ಭಾರ
ಶಾಂತ ಕುಳಿತೆ ನಿಶ್ಚಿಂತೆಯಿಂದ ನೀನೀಗ ಮಾಡೆ ದೂರ॥
ನಂಬಿಗೆಂಬುದಿದು ಅಂಬೆ! ಎಂಬೆ ನಾ ಜಗದಿ ಮುಳುಗಿಹೋಯ್ತು
ಲೋಕಶರಣೆ! ನಿರ್ವ್ಯಾಜಕರುಣೆ ಆಧಾರವಿಲ್ಲದಾಯ್ತು॥

40
ಮಡದಿಯೊಡನೆ ಮೈಗೂಡಿ ಜೋಡಿ ಒಡನಾಡು ಮೃಡನ ಜಡೆಯ
ಗಡಿಯ ಮೀರಿ ಮೇಲೇರಿ ಗೌರಿ ಬೈತಲೆಗೆ ಲಹರಿ ನಡೆಯೆ॥
ಸವತಿ ಮಚ್ಚರುಕ್ಕಲಿಸೆ ಕಣ್ಣು ಕೆಕ್ಕರಿಸಿ ಚಂಡಿ ಹೊಡೆಯೆ
ಜಟೆಯ ತಟಕೆ ಪುಟಪುಟಿಪ ನೀರನಟಿ! ಕಳೆಯೆ ಪಾಪಪಡೆಯ॥

41)
ಪ್ರಪದ್ಯಂತೇ ಲೋಕಾಃ ಕತಿ ನ ಭವತೀಮತ್ರಭವತೀಂ।
ಉಪಾಧಿಸ್ತತ್ರಾಯಂ ಸ್ಫುರತಿ ಯದಭೀಷ್ಟಂ ವಿತರಸಿ॥
ಶಪೇ ತುಭ್ಯಂ ಮಾತರ್ಮಮ ತು 'ಪುನರಾತ್ಮಾ' ಸುರಧುನಿ।
ಸ್ವಭಾವಾದೇವ ತ್ವಯ್ಯಮಿತಮನುರಾಗಂ ವಿಧೃತವಾನ್॥

42)
ಲಲಾಟೇ ಯಾ ಲೋಕೈರಿಹ ಖಲು ಸಲೀಲಂ ತಿಲಕಿತಾ।
ತಮೋ ಹಂತುಂ ಧತ್ತೇ ತರುಣತರ–ಮಾರ್ತಂಡ–ತುಲನಾಮ್॥
ವಿಲುಂಪಂತೀ ಸದ್ಯೋ ವಿಧಿ ಲಿಖಿತ ದುರ್ವರ್ಣ ಸರಣಿಂ।
ತ್ವದೀಯಾ ಸಾ ಮೃತ್ಸ್ನಾಮಮ ಹರತು ಕೃತ್ಸ್ನಾಮಪಿ ಶುಚಮ್॥

43)
ನರಾನ್ ಮೂಢಾನ್ ತತ್ತಜ್ಜನಪದ–ಸಮಾಸಕ್ತ–ಮನಸಃ।
ಹಸಂತಃ ಸೋಲ್ಲಾಸಂ ವಿಕಜ–ಕುಸುಮ–ವ್ರಾತ–ಮಿಷತಃ॥
ಪುನಾನಾಃ ಸೌರಭ್ಯೈಃ ಸತತಮಲಿನೋ ನಿತ್ಯಮಲಿನಾನ್।
ಸಖಾಯೋ ನಃ ಸಂತು ತ್ರಿದಶ ತಟಿನೀ ತೀರ ತರವಃ॥

44)
ಯಜಂತ್ಯೇಕೇ ದೇವಾನ್ ಕಠಿನತರ ಸೇವಾಂಸ್ತದಪರೇ।
ವಿತಾನ ವ್ಯಾಸಕ್ತಾ ಯಮನಿಯಮರಕ್ತಾಃ ಕತಿಪಯೇ॥
ಅಹಂ ತು ತ್ವನ್ನಾಮ ಸ್ಮರಣಕೃತ ಕಾಮಸ್ತ್ರಿಪಥಗೇ।
ಜಗಜ್ಜಾಲಂ ಜಾನೇ ಜನನಿ! ತೃಣಜಾಲೇನ ಸದೃಶಂ॥

45)
ಅವಿಶ್ರಾಂತಂ ಜನ್ಮಾವಧಿ ಸುಕೃತ ಜನ್ಮಾರ್ಜನ ಕೃತಾಂ।
ಸತಾಂ ಶ್ರೇಯಃ ಕರ್ತುಂ ಕತಿ ನ ಕೃತಿನಃ ಸಂತಿ ವಿಬುಧಾಃ॥
ನಿರಸ್ತಾಲಂಬಾನಾಮಕೃತ–ಸುಕೃತಾನಾಂ ತು ಭವತೀಂ।
ವಿನಾಽಮುಷ್ಮಿನ್ ಲೋಕೇ ನ ಪರಮವಲೋಕೇ ಹಿತಕರಮ್॥

41)
ತಾಯೆ! ನಿನ್ನನೆಷ್ಟೆಷ್ಟು ಜನರು ಆಶ್ರಯಿಸಿ ಭಜಿಪರಿಲ್ಲ!
ಹೇತುವಿಲ್ಲದಿಲ್ಲಲ್ಲಿ ಕೊಡುವೆ ನೀ ಬೇಡಿ ಬಯಸಿದೆಲ್ಲ॥
ಅಮ್ಮನಾಣೆ ನಾನೇಕೊ ಕಾಣೆ ತನತಾನೆ ಎನ್ನ ಜೀವ।
ದೇವನದಿಯೆ! ತವ ಸೇವೆಯಲ್ಲಿ ಪಡೆದಿಹುದು ಭಕ್ತಿಭಾವ॥

42)
ತಿಲಕವೆಂದು ಹಣೆಗಟ್ಟೆಮೇಲೆ ಬಟ್ಟೊಂದು ಯಾವನಿಡುವ।
ರವಿಗೆ ಹಿಡಿದ ತಮತೆರದಿ ಅವನ ಅಜ್ಞಾನವೆಲ್ಲ ಸುಡುವ॥
ಬೊಮ್ಮ ಬರೆದ ಹಣೆ–ಹಲಗೆ ದುಕ್ಕದಕ್ಕರಗಳಳಿಸಿಬಿಡುವ
ಅಮ್ಮ!ತಮ್ಮ ತಡಿಮಣ್ಣು ಎಮ್ಮನುದ್ಧರಿಸಲಾರ್ತಿಬಡುವ॥

43)
ಮೋಕ್ಷಪುರಿಗೆ ತವ ತೀರ ತೀರ ಸನಿಹದಲಿ ಅದನು ತೊರೆದ
ದೂರವಿರುವ ಜನರಣಕಿಸಲ್ಕೆ ಬಾಯ್ತೆರೆದ ಹೂವ ಸುರಿದ॥
ನಿತ್ಯ ಮಲಿನ ಅಳಿಕುಳವ ಗಂಧಪಾವನವ ಗೈವ ನಿನ್ನ
ತಡಿಯ ಗಡಿಯ ಗುಡಿಗಿಡದ ಗುಂಪು ಒಡನಾಡಿಯಾಗಲೆನ್ನ॥

44)
ಮನೆಯ ಬಿಟ್ಟು ವ್ರತ ತೊಟ್ಟು ದೇವನರ್ಚಿಪರು ಚಿತ್ತವಿಟ್ಟು
ಯೋಗ ಯಾಗ ಯಮ ನಿಯಮ ಮಾಳ್ಪರಿಹ ಕೆಲರು ಕ್ಲೇಶಪಟ್ಟು॥
ಎನ್ನ ನಿಯಮ ಯಮಪ್ರಾಣಯಾಮ ನಿನ ನಾಮ ಮಾತ್ರ ಅಂಬೆ!।
ಅದರ ಎದುರು ಜಗವೆಲ್ಲ ಹುಲ್ಲು ಹುರುಳಿಲ್ಲ ಕ್ಷುಲ್ಲಕೆಂಬೆ॥

45)
ಹುಟ್ಟಿದಂದ ದಿನ ಬಿಟ್ಟುಬಿಡದೆ ಶ್ರಮಬಟ್ಟು ಪುಣ್ಯಕೆಲಸ
ಮಾಳ್ಪ ಜನರನುದ್ಧರಿಸಲಿದ್ದ ದೇವತೆಗಳಿಲ್ಲ ಅಲಸ॥
ಗತಿಯ ಕಾಣದತಿ ದೀನ ದೂನ ಮತಿಹೀನ ಪಾಪಿಗಿಂದು
ನಿನ್ನ ಹೊರತು ನಾ ಬೇರೆ ಕಾಣೆ ಹಿತಬಂಧು ಅಮೃತಸಿಂಧು॥

46)
ಪಯಃ ಪೀತ್ವಾ ಮಾತಸ್ತವ ಸಪದಿ ಯಾತಃ ಸಹಚರೈಃ।
ವಿಮೂಢೈಃ ಸಂರಂತುಂ ಕ್ವಚಿದಪಿ ನ ವಿಶ್ರಾಂತಿಮುಗಮಮ್॥
ಇದಾನೀಂ ಉತ್ಸಂಗೇ ಮೃದುಪವನ ಸಂಚಾರ ಶಿಶಿರೇ।
ಚಿರಾದುನ್ನಿದ್ರಂ ಮಾಂ ಸದಯಹೃದಯೇ! ಶಾಯಯ ಚಿರಮ್॥

47)
ಬಧಾನ ದ್ರಾಗೇವ ದೃಢಿಮರಮಣೀಯಂ ಪರಿಕರಮ್ ।
ಕಿರೀಟೇ ಬಾಲೇಂದುಂ ನಿಯಮಯ ಪುನಃ ಪನ್ನಗಗಣೈಃ॥
ನ ಕುರ್ಯಾಸ್ತ್ವಂ ಹೇಲಾಮಿತರ-ಜನ-ಸಾಧಾರಣಧಿಯಾ।
ಜಗನ್ನಾಥಸ್ಯಾಯಂ ಸುರಧುನಿ! ಸಮುದ್ಧಾರ ಸಮಯಃ॥

48)
ಶರಚ್ಚಂದ್ರ ಶ್ವೇತಾಂ ಶಶಿಶಕಲ ಶ್ವೇತಾಲ ಮುಕುಟಾಂ।
ಕರೈಃ ಕುಂಭಾಭೋಜೇ ವರ-ಭಯನಿರಾಸೌ ಚ ದಧತೀಮ್॥
ಸುಧಾಧಾರಾಕಾರಾಭರಣವಸನಾಂ ಶುಭ್ರ ಮಕರ-
ಸ್ಥಿತಾಂ ತ್ವಾಂ ಯೇ ಧ್ಯಾಯಂತ್ಯುದಯತಿ ನ ತೇಷಾಂ ಪರಿಭವಃ॥

49)
ದರಸ್ಮಿತ ಸಮುಲ್ಲಸದ್ ವದನಕಾಂತಿ ಪೂರಾಮೃತೈಃ।
ಭವಜ್ವಲನ ಭರ್ಜಿತಾನ್ ಅನಿಶಮೂರ್ಜಯಂತೀ ನರಾನ್॥
ಚಿದೇಕಮಯ-ಚಂದ್ರಿಕಾ-ಚಯ ಚಮತ್ಕೃತಿಂ ತನ್ವತೀ।
ತನೋತು ಮಮ ಶಂ ತನೋಃ ಸಪದಿ ಶಂತನೋರಂಗನಾ॥

50)
ಮಂತ್ರೈರ್ಮೀಲಿತಮೌಷಧೈರ್ಮುಕುಲಿತಂ ತ್ರಸ್ತಂ ಸುರಾಣಾಂ ಗಣೈಃ।
ಸ್ರಸ್ತಂ ಸಾಂದ್ರ ಸುಧಾರಸೈರ್ವಿದಲಿತಂ ಗಾರುತ್ಮತೈರ್ಗ್ರಾವಭಿಃ॥
ವೀಚಿಕ್ಷಾಲಿತ,ಕಾಲಿಯಾಹಿತ-ಪದೇ ಸ್ವರ್ಲೋಕಕಲ್ಲೋಲಿನೀ।
ತ್ವಂ ಪಾಪಂ ನಿರಯಾಧುನಾ ಮಮ ಭವಜ್ವಾಲಾವಲೀಢಾತ್ಮನಃ॥

46)
ತಾಯೆ! ನಿನ್ನ ಹಾಲ್ಕುಡಿದು ನಡೆದು ಒಡನಾಡಿ ಕೂಡಿ ಆಡಿ
ಕುಣಿದು ಮೈ ದಣಿದು ಬಂದೆ ನಾ ನಿನ್ನ ಕಂದ ಖೋಡಿ॥
ನೀನು ತೆರೆಯ ತೊಡೆ ಮೇಲೆ ಮಲಗಿಸಕ್ಕರದಿ ಚುಕ್ಕು ತಟ್ಟಿ
ಹೇಳಿ ಗಾಳಿ ಜೋಗುಳವ 'ಲಾಲಿ ಮಲಗೆನ್ನ ಚಿನ್ನಗಟ್ಟಿ'॥

47)
ಏಳು ತಾಯೆ! ದೃಢವಾಗಿ ನಿಲ್ಲು, ಶಿವ ಹಾವು ಹಗ್ಗ ತೆಗೆದು
ಚಂದ್ರ-ಚೂರು ಬಿದ್ದೀತು ಕಟ್ಟು ಹರಜುಟ್ಟ ಗಟ್ಟಿ ಬಿಗಿದು॥
ಇಂದು ನೀನು ಉದ್ಧರಿಸ ಹೊರಟ ಜಗನ್ನಾಥ ಪಾಪಿ ಈತ
ನಿಯಮವಿಲ್ಲ ಇವನೆತ್ತೆ ಏನು ಆದೀತು ಘಾತಪಾತ॥

48)
ಶರದ-ಚಂದ್ರ-ಧವಲಾಂಗಿ ಗಂಗೆ ಶಿರಚಂದ್ರಚಾರುಮುಕುಟೇ।
ಕಮಲ-ಕಲಶ-ವರ-ಅಭಯವೀವ ನಾಲ್ಕೈಗಳಿಂದ ಪ್ರಕಟೇ॥
ಅಮೃತಧಾರೆಯಾಕಾರನೀರ ಜರತಾರೆ ಸೀರೆಯುಟ್ಟ
ಶ್ವೇತ-ಮಕರಸಿಂಹಾಸನಸ್ಥೆ ನಿನ ನುತಿಸೆ ಮೋಕ್ಷಪಟ್ಟ॥

49)
ಮಂದಹಸಿತ ಅರವಿಂದಲಸಿತ ಮುಖದಮೃತಕಾಂತಿಯಿಂದ।
ಭವದ ದವದಿ ಹುರಿಪಳಿಸಿ ನಿಂದ ಜನಕೆಲ್ಲ ಶಾಂತಿ ತಂದ॥
ನಿನ್ನ ಚಲುವ ಚಿನ್ಮಯದ ಘನ್ನ ಚೈತನ್ಯ ಜೊನ್ನು ಸುರಿಸಿ
ಕರುಣೆಸರಸಿ! ಶಂತನುವಿನರಸಿ! ಸಂತಸವ ಬೀರೆ ಹರಸಿ॥

50)
ಮಂತ್ರ ತಂತ್ರ ಸುರಸಂತರೆಲ್ಲ ನಿಂತಿಹರು ಆಗಿ ಕಲ್ಲ
ಅಮೃತ ಹನಿಗೆ ಸಂಜೀವಮಣಿಗೆ ಮಣಿದಿಲ್ಲ ಮಾಣಿಸಿಲ್ಲ॥
ಇಂಥ ಘೋರ ಸಂಸಾರ ಜ್ವರದ ಉರಿ ಕಡಿಮೆ ಮಾಡಿ ಕಾಯೇ
ಹಾವು ತುಳಿದ ತುಳಸಿಯನು ತಳೆದ ಹರಿಚರಣ ತೊಳೆದ ತಾಯೇ!॥

51)
ದ್ಯೂತೇ ನಾಗೇಂದ್ರ–ಕೃತ್ತಿಪ್ರಮಥಗಣಮಣಿ–ಶ್ರೇಣಿ–ನಂದೀಂದುಮುಖ್ಯಂ
ಸರ್ವಸ್ವಂ ಹಾರಯಿತ್ವಾ ಸ್ವಮಥ ಪುರಭಿದಿ ದ್ರಾಕ್ ಪಣೀಕರ್ತು ಕಾಮೇ॥
ಸಾಕೂತಂ ಹೈಮವತ್ಯಾ ಮೃದುಲಹಸಿತಯಾ ವೀಕ್ಷಿತಾಯಾಸ್ತವಾಂಬ।
ವ್ಯಾಲೋಲೋಲ್ಲಾಸಿವಲ್ಗಲ್ಲಹರಿ ನಟಿ–ಘಟೀ–ತಾಂಡವಂ ನಃ ಪುನಾತು॥

52)
ವಿಭೂಷಿತಾನಂಗ ರಿಪೂತ್ತಮಾಂಗಾ।
ಸದ್ಯಃ ಕೃತಾನೇಕ ಜನಾರ್ತಿ ಭಂಗಾ॥
ಮನೋಹರೋತ್ತುಂಗ ಚಲತ್ತರಂಗಾ।
ಗಂಗಾ ಮಮಾಂಗಾನ್ಯಮಲೀಕರೋತು॥

51)
ಪಣದಿ ಫಣಿಯ ಹಣೆಚಂದ್ರ–ಗಣವ ಗಣಪತಿಯ ಮಣಿಯ ಮಾಲೆ
ಎತ್ತು ಕೃತ್ತಿ ಯಾವತ್ತು ಭೋಳೆ ಶಿವ ತೆತ್ತು ತಾನೆ ಸೋಲೆ॥
ಶೈಲ–ಬಾಲೆ ನಗೆ–ಕೇಲಿ–ಶೀಲೆ ಭವಮೌಲಿ ಮೇಲೆ ನೋಡೆ
ಬೆಚ್ಚಿ ಬೆದರಿ ಹುಚ್ಚೆದ್ದು ಹರಿವ ನದಿ ಕುಣಿತಕುದಿತ ಪಾಡೆ॥

52)
ಹಣೆಯ ಕುಣಿಯ ಕಿಡಿಕುಣಿಸಿ ಕಾಮ ಕಮರಿಸಿದ ಗೌರಿಪತಿಯ
ಈಶ ಕೇಶಪಂಜರದಿ ನಲಿವ ರಂಜಿಸುವ ಮುದ್ದುಗಿಣಿಯ!॥
ತರಲ ತೆರೆಯ ತೆರೆತೆರೆದು ತೋರಿ ತರತರದ ರಸದ ರೂಪ
ಮೆರೆವ ಮೊರೆವ ಜಗ ಪೊರೆವ ಲಹರಿ ತವ ಹರಿಯಲೆನ್ನ ಪಾಪ॥

# ಮಂದಾಕಿನೀ ಅಭಿವಂದನೆ

ಭಾವಗಂಗಾ ಕನ್ಯಾಗತೆಂದು ಕನ್ನಡದ ನಾಡನುಡಿಗೆ ।
ಹದುಳವೆಂದ ನನ್ನ ಮಿದುಳು ನೆನಪು ಧುಳುಕಿದಳು ಎಲ್ಲ ಕಡೆಗೆ ॥
ರಸಧಾರೆಯಾನಂದಭಾರ ಎದೆಯುಕ್ಕಿ ಶಬ್ದ ಕಡೆಗೆ ।
ಎನ್ನ ಮುಖದ ಗೋಮುಖದಿ ಚಿಮ್ಮಿಹರಿದಿಹುದು ಗಂಗೆಲಹರಿ ॥

ರಾಜ ಕವಿಯ ಸಂಸ್ಕೃತದ ಸ್ವರ್ಣಭೂಮಿಯಲಿ ಹರಿದ ತೆರದಿ ।
ಗಂಗೆ ಎನ್ನ ಕನ್ನಡದ ಪಾತ್ರದಲ್ಲಿ ಹರಿದಳಂತೆ ಭರದಿ ॥
ರಾಜಘಾಟ ಮರುಳ–ವಾಟ ಗಿರಿದರಿಯು ಗಿರಿಶಿಖರವು ।
ಆಲಕನಂದೆ ಹರಿಯುವಳು ಒಂದೆ ಸಮ ಒಂದೆ ರಸದ ಹರವು ॥

ಕಾವ್ಯಬ್ರಹ್ಮ ಜಗನ್ನಾಥ, ಪಂಢರೀನಾಥ ಮಂಕುತಿಮ್ಮ ।
ಇವನು ಕರೆಯೆ ಎದೆಕರಗಿ ಹರಿದೆ ಸೂದೆಸುರಿದೆ ಧನ್ಯನಮ್ಮ ।
ನಾನು ಮಂದ ನನ್ನಾಕಿ ನೀನು *ಮಂದಾಕಿನೀತಿ ನಾಮ ।
ಸಾರ್ಥವೆಂದು ಅಭಿನಂದಿಸಿಂದು ಅರ್ಪಿಸುವೆ ಶತಪ್ರಣಾಮ ॥

*ಮಂದಂ ಅಕತಿ ಇತಿ ಮಂದಾಕಿ(

## ಮಹಾಕವಿ ವಾಲ್ಮೀಕಿ ವಿರಚಿತಂ
## ಸಂಸ್ಕೃತ ಗಂಗಾಷ್ಟಕಮ್

1)

ಮಾತ!ಃ ಶೈಲಸುತಾಸಪತ್ನಿ! ವಸುಧಾ–ಶೃಂಗಾರ–ಹಾರಾವಲಿ!
ಸ್ವರ್ಗಾರೋಹಣ–ವೈಜಯಂತಿ! ಭವತೀಂ ಭಾಗೀರಥಿ! ಪ್ರಾರ್ಥಯೇ॥
ತ್ವತ್ತೀರೇ ವಸತಃ ತ್ವದಂಬು ಪಿಬತಃ ತ್ವದ್ವೀಚಿಷು ಪ್ರೇಂಖತಃ ॥
ತ್ವನ್ನಾಮ ಸ್ಮರತಃ ತ್ವದರ್ಪಿತದೃಶಃಸ್ಯಾನ್ಮೇ ಶರೀರವ್ಯಯಃ ॥ 1 ॥

2)

ತ್ವತ್ತೀರೇ ತರುಕೋಟರಾಂತರಗತೋ ಗಂಗೇ ವಿಹಂಗೋ ವರಂ ।
ತ್ವನ್ನೀರೇ ನರಕಾಂತಕಾರಿಣಿ ವರಂ ಮತ್ಸ್ಯೋಽಥವಾ ಕಚ್ಛಪಃ ॥
ನೈವಾನ್ಯತ್ರ ಮದಾಂಧ–ಸಿಂಧುರ–ಘಟಾ–ಸಂಘಟ್ಟ–ಘಂಟಾ–ರಣ
ತ್ಕಾರಸ್ತತ್ರ ಸಮಸ್ತ–ವೈರಿ–ವನಿತಾ–ಲಬ್ಧಸ್ತುತಿರ್ಭೂಪತಿಃ ॥ 2 ॥

3)

ಉಕ್ಷಾ ಪಕ್ಷೀ ತುರಗ ಉರಗಃ,–ಕೋ ಪಿ ವಾ ವಾರಣೋ ವಾ ।
ವಾರಾಣಸ್ಯಾಂ ಜನನ–ಮರಣ–ಕ್ಲೇಶ–ದುಃಖಾ ಸಹಿಷ್ಣುಃ ॥
ನತ್ವನ್ಯತ್ರ ಪ್ರವಿರಲ–ರಣತ್–ಕಿಂಕಿಣೀ–ಕ್ವಾಣ–ಮಿಶ್ರ
ವಾರಸ್ತ್ರೀಭಿಃ ಚಮರಮರುತಾ ವೀಜಿತೋ ಭೂಮಿಪಾಲಃ ॥ 3 ॥

4)

ಅಭಿನವ ಬಿಸವಲ್ಲೀ ಪಾದಪದ್ಮಸ್ಯ ವಿಷ್ಣೋಃ
ಮದನ–ಮಥನ–ಮೌಲೇರ್ಮಾಲತೀ ಪುಷ್ಪಮಾಲಾ ॥
ಜಯತಿ ಜಯಪತಾಕಾ ಕಾಪ್ಯಸೌ ಮೋಕ್ಷಲಕ್ಷ್ಮ್ಯಾಃ
ಕ್ಷಪಿತ–ಕಲಿ–ಕಲಂಕಾ ಜಾಹ್ನವೀ ನಃ ಪುನಾತು ॥ 4 ॥

5)

ಕಾಕೈರ್ನಿಷ್ಕುಷಿತಂ ಶ್ವಭಿಃ ಕವಲಿತಂ ಗೋಮಾಯುಭಿರ್ಲುಂಠಿತಂ ।
ಸ್ರೋತೋಭಿಶ್ಚಲಿತಂ ತಟಾಂಬು –ಲುಲಿತಂ ವೀಚೀಭಿರಾಂದೋಲಿತಂ॥
ದಿವ್ಯಸ್ತ್ರೀ–ಕರಚಾರು–ಚಾಮರ–ಮರುತ್–ಸಂವೀಜ್ಯಮಾನಃ ಕದಾ
ದ್ರಕ್ಷ್ಯೇಹಂ ಪರಮೇಶ್ವರಿ ತ್ರಿಪಥಗೇ ಬಾಗೀರಥಿ! ಸ್ವಂ ವಪುಃ ॥ 5 ॥

# ಕನ್ನಡ ಗಂಗಾಷ್ಟಕ

1)

ತಾಯೆ! ಹೈಮವತಿ–ಸವತಿ! ಪ್ರೇಮವತಿ! ಸ್ವರ್ಗ–ಪಯಣ–ಕೇತು
ತಿರೆಯ ಉರಗ ಶೃಂಗಾರಹಾರ ನೀ ನಡೆಸು ಒಂದು ಮಾತು ॥
ದಡದಿ ಆಡಿ ಜಲಪಾನ ಮಾಡಿ ತೆರೆ–ಹೋಡಿಯಾಡಿ ನಿನ್ನ ।
ಹಾಡಿ ಪಾಡಿ ನದಿ ನೋಡನೋಡುತೀದೇಹ ಸವೆಯಲೆನ್ನ ॥1॥

2)

ನಿನ್ನ ತೀರ–ತರು–ಸ್ವೈರ–ಸ್ವಾರ–ಖಗ ಸುಕೃತಿ ನೂರು ಪಾಲು
ಸ್ವಚ್ಛ ಜಲದಿ ಸ್ವಚ್ಛಂದ ಚರಿಪ ಕಚ್ಛಪವೊ ಮಚ್ಛ್ಯ ಮೇಲು
ಅದರ ಮುಂದೆ ಮನೆ ಮುಂದೆ ಗಂಧಗಜ ತೂಗುವಷ್ಟಸಿರಿಯ
ವೈರಿ–ರಾಜ–ರಾಜೀವವದನೆ–ನುತ ರಾಜ್ಯವೆಂತು ಸರಿಯು ? ॥2॥

3)

ಹಕ್ಕಿಪಕ್ಕಿ–ಹಸು–ಹಾವು–ಗೋವು ಗಜ–ವಾಜಿ–ಕಪಿಯು ಕೋಽಪಿ
ಏನೆ ಆಗಿ ನಾ ಹುಟ್ಟಲಲ್ಲಿ ಕಾಶಿಯಲಿ ಜನುಮ ಪಾಪಿ॥
ಬೇಡ ಬೇರೆಕಡೆ ನಾನು ಆದರೂ ಸಾರ್ವಭೌಮರಾಜ
ಮದಿರೆ–ಮುದಿತ–ಬೆಲೆಚದುರೆ–ಚಲಿತ–ಚಾಮರದ ಭೋಗ–ಭಾಜ ॥3॥

4)

ಹರಿಯ ವಿಮಲ–ಪದ–ಕಮಲ ಮುಕುಲ–ಮೃಣಾಲ–ಧವಲ–ನಾಲೇ
ಮದನ–ಮಥನ–ಮೃಡ–ಮೌಲಿ ಮೇಲೆ ಮಾಲತಿಯ ಮೃದುಲಮಾಲೇ
ಮೋಕ್ಷ–ಸೌಖ್ಯ–ಸೌಭಾಗ್ಯ–ಲಕ್ಷ್ಮಿಯ ವಿಜಯವೈಜಯಂತಿ ! ॥
ಕಲಿಯ ಕಲುಷ ಕಳೆದೀಯೆ ಹರುಷ ರಸವಂತಿ ! ಸೌಖ್ಯಶಾಂತಿ ॥4॥

5)

ಕಾಗಿ ಕುಕ್ಕಿ ನರಿನಾಯಿ ಹೆಕ್ಕಿ ನರ ಹರಿದು ಬುರುಡೆ ಸಿಡಿದ ।
ದಡಕೆ ಬಡೆದ ತೆರೆ ಹೊಡೆದ ಸೆಳವು ಹರಿಹಿಡಿದು ನಡೆದ ಒಡೆದ ॥
ನಿನ್ನ ದಡದಿ ಮಡಿದೆನ್ನ ಹೆಣದ ಈ ಸೊಬಗು ಸುರವಿಮಾನೇ ।
ಅಮರಿ ಚವರಿ ಕುವರಿಯರ ನಡುವೆ ಕುಳಿತೆಂದು ಕಾಂಬೆ ತಾನೇ !॥5॥

6)
ಏತತ್ತಾಲ-ತಮಾಲ-ಸಾಲ-ಸರಲ-ವ್ಯಾಲೋಲ-ವಲ್ಲೀ-ಲತಾ
ಚ್ಛನ್ನಂ ಸೂರ್ಯ-ಕರ-ಪ್ರತಾಪ-ರಹಿತಂ ಶಂಖೇಂದು ಕುಂದೋಜ್ವಲಂ॥
ಗಂಧರ್ವಾಮರಸಿದ್ಧ-ಕಿನ್ನರ-ವಧೂ-ತುಂಗ-ಸ್ತನಾಸ್ಫಾಲಿತಂ ।
ಸ್ನಾನಾಯ ಪ್ರತಿವಾಸರಂ ಭವತು ಮೇ ಗಾಂಗಂ ಜಲಂ ನಿರ್ಮಲಂ ॥ 6 ।

7)
ಪಾಪಾಪಹಾರಿ ದುರಿತಾರಿ ತರಂಗಧಾರಿ ।
ಶೈಲಪ್ರಚಾರಿ ಗಿರಿರಾಜ-ಗುಹಾವಿದಾರಿ ॥
ಝುಂಕಾರಕಾರಿ ಹರಿ-ಪಾದ-ರಜೋಪಹಾರಿ !
ಗಾಂಗಂ ಪುನಾತು ಸತತಂ ಶುಭಕಾರಿ ವಾರಿ ॥ 7 ॥

8)
ಗಾಂಗಂ ವಾರಿ ಮನೋಹಾರಿ !
ಮುರಾರಿ ಚರಣಚ್ಯುತಮ್ ॥
ತ್ರಿಪುರಾರಿ ಶಿರಶ್ಚಾರಿ ।
ಪಾಪಹಾರಿ ಪುನಾತು ಮಾಮ್ ॥ 8 ॥

9)
ಗಂಗಾಷ್ಟಕಂ ಪಠತಿ ಯಃ ಪ್ರಯತಃ ಪ್ರಭಾತೇ !
ವಾಲ್ಮೀಕಿನಾ ವಿರಚಿತಂ ಶುಭದಂ ಮನುಷ್ಯಃ ॥
ಪ್ರಕ್ಷಾಲ್ಯ ಗಾತ್ರ-ಕಲಿ-ಕಲ್ಮಷ-ಪಂಕಮಾಶು ।
ಮೋಕ್ಷಂ ಲಭೇತ್ ಪತತಿ ನೈವ ನರೋ ಭವಾಬ್ಧೌ॥

॥ ಇತಿ ಶ್ರೀ ವಾಲ್ಮೀಕಿ ವಿರಚಿತಂ ಗಂಗಾಷ್ಟಕಂ ಸಂಪೂರ್ಣಮ್ ॥

6)
ತಾಲ–ತೆಂಗು ತೊಂಗಲವು ಕೊಂಗು–ಹೊಂಗಾಡು–ಹೊಂಗೆ–ಗುಂಪು ।
ಬಳ್ಳಿ ತಳಿರು ತಳಕೊಗೆದು ಹೆಣೆದು ಬಿಸಿಲಿಲ್ಲ ದಡದಿ ತಂಪು ॥
ಶಂಖ ಬಿಳಿಯ ಶಶಿ ಕಳೆಯ ತಿಳಿಯ ಹೊಳೆಹೊಳೆವ ಹಿರಿಯ ಹೊಳೆಯ।
ನಿತ್ಯ ಸ್ನಾನಕಿರಲಮರಿ–ಕಿನ್ನರೀ–ಕುಚವ ತೊಳೆವ ತೋಯ ॥6॥

7)
ದುಃಖಹಾರಿ ದುರದೃಷ್ಟವೈರಿ ತರತರದ ತೆರೆಯ ತೂರಿ ।
ಶೈಲವೇರಿ ದರಿ ಕೊರೆಯ ಹಾರಿ ಪುರಸೇರಿ ಭುವನಚಾರಿ ॥
ಪಂಕದೂರಿ, ಝುಂಕಾರಕಾರಿ ಓಂಕಾರ–ಚಿತ್ತಹಾರಿ ।
ನಿನ್ನ ವಾರಿ ಮಮ ಸೌಖ್ಯಕಾರಿ ಹರಿ–ಚರಣ–ಧೂಳಿ–ಧಾರಿ ॥7॥

8)
ನಂದಕಂದ–ಪಾದಾರವಿಂದ–ಮಕರಂದ–ಬಿಂದು–ಸಿಂಧು ।
ಚಂದ್ರಚೂಡ–ಜಡೆ–ಕಡಲಿನೊಡಲು ಧೀಂಕಿಡುವ ತಡಸಲೊಂದು ॥
ಅಮೃತ–ರುಚಿರ–ರುಚಿ–ರಮ್ಯ–ರೂಪ ರಸರಂಗ ಅಂತರಂಗ ।
ಗಂಗೆ ನಿನ್ನ ದಯೆಜಲತರಂಗ ಮಾಡಲ್ಕೆ ದುರಿತಭಂಗ ॥ ॥8॥

9)
ಮೊತ್ತಮೊದಲು ವೃತ್ತದಲಿ ಕಾವ್ಯ–ಹೊತ್ತಿಗೆಯ ಶಬ್ದ–ಭಿತ್ತಿ
ಯಲ್ಲಿ ಕೆತ್ತಿವಾಗ್ಧ್ವಜವನೆತ್ತಿ ರಸಗವಿತೆ–ಟೊಂಗೆ ಹತ್ತಿ ॥
ಕುಕಿಲುವಾದಿ ವಾಲ್ಮೀಕಿ–ಕೋಕಿಲೊರೆದಮರನದಿಯ ಸ್ತೋತ್ರ ।
ಬೆಳಗು ಪಠಿಸೆ ಬೆಳಗುವುದು ಕೀರ್ತಿ ನರಮಾತ್ರ ಮೋಕ್ಷ ಪಾತ್ರ ॥

॥ ವಾಲ್ಮೀಕೀ ಕೃತ ಗಂಗಾಷ್ಟಕ ಅನುವಾದ ಸಂಪೂರ್ಣ ॥

# ಕವಿ ಪರಿಚಯ

ಸಂಸ್ಕೃತ ಸೌರಾಷ್ಟ್ರದ ಗಿರಿನಾರ ಕಂದರಗಳಲ್ಲಿ ಜಗನ್ನಾಥ ಒಂದು ಸಿಂಹದ ಮರಿ. ಹುಟ್ಟಿದಂದಿನಿಂದಲೇ ಧೀಮಂತಿಕೆಯ ಹಮ್ಮು ಹೊಗರೇರಿ ಹೂಂಕರಿಸುತ್ತಲೇ ಇದ್ದ. ಆ ಕಾವ್ಯ ಕಂಠೀರವನಿಗೆ ಯಾರಿಂದಲೂ 'ನಾಭಿಷೇಕೋ ನ ಸಂಸ್ಕಾರಃ' ಆದರೂ ಅವನು ತನ್ನ ಎಳೆಯ ವಯಸ್ಸಿನಲ್ಲಿಯೇ ಪಾಂಡಿತ್ಯದ ಕಂಡೂತಿಯಿಂದ ವಾದ ಭೂಮಿಗೆ ಇಳಿದಾಗ ಅಲ್ಲಿನ ದರ್ಪದ ದಿಙ್ನಾಗಗಳೆಲ್ಲ ದಿಕ್ಕೆಟ್ಟು ಓಡಿದವು. 'ದಿಗಂತೇ ಶ್ರೂಯಂತೇ' ಆದರು. ಪಂಡಿತರ ಪಲಾಯನವೇ ಅವನಿಗೆ ಗೀರ್ವಾಣಗಿರಿಗರ್ಭದಲ್ಲಿ ಸ್ವಯಮೇವ ಮೃಗೇಂದ್ರತೆಯ ಪಟ್ಟ ಕಟ್ಟಿ ಗೌರವದ ಗದ್ದುಗೆಯನ್ನಿತ್ತಿತ್ತು. ಸಂಸ್ಕೃತದ ಸುರಗಿರಿಯ ದೂರದದರಿಕೊರಿಗಳಲ್ಲಿ ಹಣಿಕಿ ಹಾಕಿದರೆ ಇಂದಿಗೂ ಆ ತುಂಟ ಹರಿಪತಿಯ ಅಕುಂಠ ಕಂಠನಾದ ಹೂಂಕರಿಸಿ ಬಂದು ದುಮ್ ದುಮಿಸಿದಂತಾಗುವುದು.

**"ವಾಙ್ಮಯ ವಿಶ್ವಾಮಿತ್ರನ ಪ್ರಜ್ಞಾತಾಂಡವ"**

ಅವನ ಶೈಶವ ಸಿಂಹನಾದವನ್ನು ಕೇಳಿಯೇ ಘನಪಂಡಿತ ಗಂಧ–ಗಜಗಳೆಲ್ಲ ಗಾಳಿಗರವಾದಂತೆ ಹೆದರಿ ಹುಚ್ಚೆದ್ದು ಹರಿದೋಡಿದಾಗ 'ನಖಾನಾಂ ಪಾಂಡಿತ್ಯ ಪ್ರಕಟಯತು ಕಸ್ಮಿನ್ ಮೃಗಪತಿಃ' ನನ್ನ ನಖ–ಶಿಖಾಂತ ಪಾಂಡಿತ್ಯವನ್ನು ಯಾರ ಮೇಲೆ ತೋರಲಿ? ಈ ನನ್ನ ವಿದ್ವತ್ತೆಯೆಲ್ಲ ಯಾರನ್ನೂ ಜಯಿಸದೇ–ವ್ಯಯಿಸಿ ಹೋಗುವದಲ್ಲ, ಎಂದು ಕೊರಗಿ ಕನಲಿದ್ದಾನೆ ಈ ಕವಿ ಕಲಭ. ಆದರೆ ಕೈಗಾವದೂ ಸಿಕ್ಕದಾಗ ಕಾನನದ ಕೋಡುಗಲ್ಲನ್ನೇ ಕಾಡಾನೆಯೆಂದು ಬಗೆದು. ತನ್ನ ಉಗುರಿನಿಂದ ಬಗಿದು, ಶೈಲ ಶಿಲಾ ಪದರು ಪದರುಗಳನ್ನೆಲ್ಲ ಸೀಳಿ ಹೋಳುಮಾಡುವ ಹರಿಮರಿಯಂತೆ ಜಗನ್ನಾಥನಾದರೂ ಆ ಪಂಡಿತರಾರೂ ಕಾಣದಾಗ ಅವರ ಪಾಂಡಿತ್ಯದ ಪ್ರತೀಕಗಳಂತಿರುವ ಅವರ ಗ್ರಂಥಗಳ ಮೇಲೆ ಎರಗಿದ್ದುಂಟು. ನ್ಯಾಯ, ವ್ಯಾಕರಣ, ಮೀಮಾಂಸಾ, ಸಾಹಿತ್ಯ ಮೊದಲಾದ ಶಾಸ್ತ್ರೀಯ ಸಂಸಾರದ ಸೀಮಾ ಪುರುಷರೆಂದೆನಿಸಿಕೊಂಡ ಮಹಾ ಮಹಾ ಪಂಡಿತರ ಕೃತಿಗಳನ್ನೆಲ್ಲ ತನ್ನ ನುಡಿಗೊಡಲಿಯಿಂದ ಕಡಿದೊಗೆದು ಪ್ರತಿಭಾ

ಪರಶುರಾಮನಾಗಿ ನಿಂತುಕೊಂಡಿದ್ದಾನೆ ಆ ಜಗನ್ನಾಥ. ಅವನ ಪಾಂಡಿತ್ಯದ ಪರಶುಧಾರೆಗೆ ಹಿರಿಯರೆಂಬ ಹೆದರಿಕೆಯಿಲ್ಲ. ಗುರುಗಳೆಂಬ ಗೌರವ ಭಾವವಿಲ್ಲ. ಅಪ್ಪಯ್ಯ ದೀಕ್ಷಿತರಂಥ ಷಡ್ ದರ್ಶನಾಚಾರ್ಯರಿಗೂ ಸೊಪ್ಪು ಹಾಕದೇ, ಭಟ್ಟೋಜಿ ದೀಕ್ಷಿತರಂಥ ಶಬ್ದ ಬ್ರಹ್ಮರ ಶಿಕ್ಷಾ-ಪ್ರೇಕ್ಷಾಗಳ ಪರಿವೆ ಇಲ್ಲದೇ ಅವರ ಉದ್ಗ್ರಂಥಗಳನ್ನೆಲ್ಲ ಬಾರದ ಕಂತೆಗಳೆಂದು ಹರಿದು ತರಿದು ಅಕ್ಷರಶಃ ಖಂಡಿಸಿ ಹಾಕಿದ್ದಾನೆ. ರಸಗಂಗಾಧರ, ಮನೋರಮಾಕುಚ ಮರ್ದಿನೀ, ಚಿತ್ರಮೀಮಾಂಸಾ ಖಂಡನ ಮೊದಲಾದ ತನ್ನ ಗ್ರಂಥಗಳಲ್ಲಿ ಪ್ರಾಚೀನ ಶಾಸ್ತ್ರೀಯ ಪ್ರಪಂಚದ ಸನಾತನ ಸಾಂಪ್ರದಾಯಿಕ ಸಿದ್ಧಾಂತಗಳನ್ನೆಲ್ಲ ತನ್ನ ಬುದ್ಧಿ ಬಲದಿಂದ ವಿಧ್ವಂಸಗೊಳಿಸಿ ಧೀರ ವೀರಭದ್ರನಂತೆ ಪ್ರಜ್ಞಾತಾಂಡವ ಗೈದಿದ್ದಾನೆ. ವೀರ ವಿಶ್ವಾಮಿತ್ರನಂತೆ ತನ್ನ ಬೌದ್ಧಿಕ ಬ್ರಹ್ಮತೇಜಸ್ಸಿನಿಂದ ಭಾವಾಕಾಶದ ರಸನೀಲದಲ್ಲಿ ಪ್ರಜ್ಞಾನ ಘನವಾದ ಪ್ರತಿ-ಸೃಷ್ಟಿಯೊಂದನ್ನು ನಿರ್ಮಿಸಿದ್ದಾನೆ.

## ಕಸ್ತೂರೀ ಮೃಗದ ಸುಗಂಧ ಭಿಕ್ಷೆ ?

ಅವನಿಂದ ಸೃಷ್ಟವಾದ ರಸಲೋಕದಲ್ಲಿ ದೃಷ್ಟಾಂತಕ್ಕಾದರೂ ಹಳೆಯ ಪದ್ಯಗಳನ್ನು ಹೇಳುವದಿಲ್ಲ. ಹಿಂದಿನವರ ಹಂಗು ಇಲ್ಲ. ಹಿರಿಯರ ಋಣವಿಲ್ಲ.

ನಿರ್ಮಾಯ ನೂತನ ಮುದಾಹರಣಾನುರೂಪಂ
ಕಾವ್ಯ ಮಯಾತ್ರ ನಿಹಿತಂನ ಪರಸ್ಯ ಕಿಂಚಿತ್
ಕಿಂ ಸೇವ್ಯತೇ ಸುಮನಸಾಂ ಮನಸಾಪಿ ಗಂಧಃ
ಕಸ್ತೂರಿಕಾ ಜನನಶಕ್ತಿಭೃತಾ ಮೃಗೇಣ

ಈ ರಸಕುಂಡವನ್ನು ತುಂಬುವ ಕಾವ್ಯದ ಝುರಿಗಳೆಲ್ಲ ನನ್ನ ಮೇಧಾ ಮಾನಸದಿಂದಲೇ ಹರಿದು ಬಂದವುಗಳು. ಇದರಲ್ಲಿ ಬೇರೊಬ್ಬರ ತಟ್ಟೆಯಿಂದ ಒಂದು ತೊಟ್ಟನ್ನೂ ತೆಗೆದುಕೊಂಡಿಲ್ಲ. ಕಸ್ತೂರೀ ಮೃಗವು ಸುಗಂಧ ಕೊಡು ಎಂದು ಕಾಡು ಹೂವಿಗೆ ಕೇಳಬಹುದೇ? ಎಂದು ಕಾಕು ಕೊಂಕುಗಳ ಬಿಂಕದಿಂದಲೇ ಕೇಳಿ ರಸರಂಗಕ್ಕೆ ಸ್ವಯಂಪೂರ್ಣತೆಯನ್ನು ಹೇಳಿದ್ದಾನೆ.

## ಬುದ್ಧಿಭಾವಗಳ ವಿದ್ಯುದಾಲಿಂಗನ

ಶಾಸ್ತ್ರಾರ್ಥದ ಸಂಗ್ರಾಮಾಂಗಣದಲ್ಲಿ ಜಗನ್ನಾಥನ ಬೌದ್ಧಿಕ ಶಾರ್ದೂಲ ವಿಕ್ರೀಡಿತವನ್ನು ಕಂಡವರಿಗೆ ಇವನೊಬ್ಬ ರುಕ್ಷನಾದ ಶುಷ್ಕತರ್ಕ ಪಂಡಿತನಿರಬಹುದೆಂಬ ಕಲ್ಪನೆ ಬರುವದು. ಆದರೆ ಅವನ ಇಂಥ ಶಾಸ್ತ್ರ

ಸುಸಂಸ್ಕೃತ ಶಿರಃ ಪಿಂಡದಲ್ಲಿ ಪ್ರಖರ ಪಾಂಡಿತ್ಯದ ಅಗ್ನಿಕುಂಡ ಉರಿಯುತ್ತಿದ್ದರೂ ಕಾವ್ಯದ ಸೆಲೆ ಬತ್ತಿಲ್ಲ. ರಸದ ನೆಲೆ ಒಣಗಿಲ್ಲ. ಪ್ರತಿಭೋದ್ದೀಪಿತನಾದ ಅವನ ಹರಿತ ಬುದ್ಧಿಯ ಹರಿಯೊಲೆಯ ಉರಿಗೆ ಅವನ ಕಲ್ಪನೆಯ ಕಲ್ಪವಲ್ಲರಿಯ ಕುಡಿ ಕಮರದೇ ಅದರ ಕಾವಿಗೆ ಕಾವ್ಯ ಪುಟಗೊಂಡು ರಮ್ಯವಾದ ರಸಭಟ್ಟಿ ಇಳಿದಿದೆ. ವಿದ್ವತ್ತೆಯ ಇಂಥ ವಿದ್ಯುದಾಲಿಂಗನಕ್ಕೆ ಹೂತುನಿಂತ ಅವನ ಕಾವ್ಯ-ಕುಸುಮ ಉರಿಯ ತೆರೆಯಲ್ಲಿಯೇ ಅರಳಿ ನಿಂತ ಹೊಂದೊಡವೆಯಂತೆ ಚಿರಂತನ ಚಲುವಿಕೆಯ ಕಳೆಕಾಂತಿಗಳನಾಂತು ಕಳಕಳಿಸುತ್ತಲಿದೆ. ಅವನ ಪಾಂಡಿತ್ಯ ಹಾಗೂ ಕವಿತ್ವಗಳು ಪರಸ್ಪರ ಮಾರಕವಾಗದೇ ಪೂರಕವಾಗಿವೆ. ಶೋಷಕವಾಗದೆ ಮಿಥಃಪೋಷಕವಾಗಿದೆ. ಒಂದಕ್ಕೊಂದು ದಾಹದಾರುಣವಾಗದೇ ಸ್ನೇಹಪೂರಣವಾಗಿದೆ. ಅವನ ರಸವಾಹಿನಿಯು ವೈದುಷ್ಯದ ಕಾವಿನ ಕುಲುಮೆಯಲ್ಲಿ ಸೋಸಿ ರಾಗರಂಜಿತವಾದ ಭಾವದ ಚಿಲುಮೆಯಿಂದ ಸೂಸಿಬಂದಿದೆ. ಆದುದರಿಂದ ಅದು ಒಂದರ ಸತ್ಯದಿಂದ, ಇನ್ನೊಂದರ ಸೌಂದರ್ಯದಿಂದಲೂ ಕೂಡಿಕೊಂಡು ಭುವನ ಬಂಧುರವಾಗಿ, ಕವನ ಸುಂದರವಾಗಿ ನಿಂತುಕೊಂಡಿದೆ. ಅವನ ಕವನಗಳಲ್ಲಿ ಪಾಂಡಿತ್ಯ ಕಲ್ಪಕತೆ ಪ್ರತಿಭೆಗಳು ಮುಪ್ಪುರಿಗೊಂಡು ಮಾತು ಮಾತಿನಲ್ಲಿಯೂ ಮಿಂಚು ಕುಂಚಾಡಿ, ಮಾಧುರಿಯ ಮಡುಗಟ್ಟುವಂತೆ ಮಾಡಿವೆ. ಮೃದ್ವೀಕಾ ಮಧ್ಯ ನಿರ್ಯನ್ ಮಸೃಣ ಮಧು ಝುರೀ ಮಾಧುರೀ ಭಾಗ್ಯಭಾಜಾಂ । ವಾಚಾಂ ಆಚಾರ್ಯತಾಯಾಃ ಪದಮನುಭವಿತುಂ 'ಕೋಸ್ತಿ ಧನ್ಯೋ ಮದನ್ಯಃ' ? ಎಂದು ಕವನ ಕಾಮನಬಿಲ್ಲಿಗೆ ಪ್ರಶ್ನ ಪುಷ್ಪವನ್ನು ಹೂಡಿ ಕೇಳಿದಾಗ 'ನಾಸ್ತಿಧನ್ಯಃತ್ವದನ್ಯಃ' ಎಂದೇ ಉತ್ತರ ಬರುವದು ಸಹಜ ಹಾಗೂ ಸಮುಚಿತವಾಗಿದೆ.

## ಕಥಾ ಕುಂಜ

ಈ ಕವಿ ಕುಂಜರನ ಜೀವನ ಚರಿತ್ರದ ಮೇಲೆ ಅನೇಕ ದಂತ ಕಥೆಗಳ ಸುಂದರವಾದ ಹೂವಿನ ಹಂದರ ಹಬ್ಬಿಬಿಟ್ಟಿದೆ. ಅದರಲ್ಲಿ ಚಾರಿತ್ರಿಕ ಸತ್ಯವೆಷ್ಟು? ಕಥಾಭಾಗವೆಷ್ಟು ಎಂಬುದನ್ನು ಕಂಡುಹಿಡಿಯುವುದೇ ದುಸ್ತರವಾಗಿದೆ. ಅವನ ಬಾಳಿನ ರಂಗಮಂಟಪದ ಸುತ್ತು-ಮುತ್ತು ಹೆಣೆದು ಇಳಿಬಿಟ್ಟ ಮುತ್ತಿನ ಜಲ್ಲರಿಗಳಂತಿರುವ ಈ ಕಟ್ಟುಕಥೆಗಳು ಸತ್ಯದ ಸಮಾಧಿ ಮಾಡಿದ್ದರೂ ಅವನ ಗ್ರಂಥಗಳು ಮಾತ್ರ ಅವನ ಪ್ರತಿಭಾ ಮಂದಿರಕ್ಕೆ ಗೌರವದ ಗೋಪುರ ಕಟ್ಟಿ ಕೀರ್ತಿಯ ಕಳಸವನ್ನಿಡುತ್ತವೆ. ಆದರೆ ಅವನದೆಂದು ಹೇಳಲಾಗುವ ಎಷ್ಟೋ

ರಸರಮ್ಯವಾದ ಬಂಧುರ ಪದ್ಯಗಳು ಕವಿಯ ತುಂಬು ತಾರುಣ್ಯದ ಲೋಲ ಜೀವನಕ್ಕೆ ಶೃಂಗಾರದ ರಂಗ ಹೊಯ್ದು ಜಗನ್ನಾಥನನ್ನು ಒಂದು ಪ್ರೇಮಪಂಜರದ ಪಂಚರಂಗಿಯ ಅರಗಿಣಿಯನ್ನು ಮಾಡಿಬಿಟ್ಟಿವೆ. ಭಾಮಿನೀ ವಿಲಾಸದಲ್ಲಿ ಕವಿಯು 'ದಿಲ್ಲೀವಲ್ಲಭ ಪಾಣಿಪಲ್ಲವತಲೇ ನೀತಂ ನವೀನಂ ವಯಃ' ಎಂದು ಎದೆ ತುಂಬಿ ಹೇಳಿದ ಮಾತು ಹಾಗೂ ಮಾತಿನಲ್ಲಿರುವ 'ಪಾಣಿ ಪಲ್ಲವಲತಲೇ ನೀತಂ ನವೀನಂವಯಃ' ಮೊದಲಾದ ಸಾರ್ಥಕ ಶಬ್ದಗಳ ಹಿಂದಿನಿಂದ ಎದ್ದು ಬರುವ ಕವಿಯ ರಸಜೀವನದ ಸ್ಮೃತಿ, ಮಧುರ ನರುಗಂಪು ಈ ಕಟ್ಟುಕತೆಗಳಲ್ಲಿಯೂ ಸತ್ಯದ ನೆರಳು ಅರಳಿ, ಹುಡಿ ಹುರುಳಾವಂತೆ ಮಾಡುತ್ತವೆ. ಇದೆಲ್ಲ ಸಂಶೋಧಕರಾದ ಇತಿಹಾಸಕಾರರ ಅನ್ವೇಷಣಶೀಲವಾದ ಚಿಕಿತ್ಸಕ ಬುದ್ಧಿಗೆ ಆಹ್ವಾನವೀಯುತ್ತದೆ. ಇರಲಿ, ಪ್ರಕೃತ ನಾವಿಲ್ಲಿ ಸಾಮಾನ್ಯವಾಗಿ ಅವನ ಗ್ರಂಥ ಹಾಗೂ ಕಿಂವದಂತಿಗಳಿಂದ ತಿಳಿದುಬರುವ ಕವಿಕಥೆಯನ್ನು ಸಂಕ್ಷಿಪ್ತವಾಗಿ ರೂಪಿಸುವೆವು.

## ಜಗನ್ನಾಥನ ಜನನ ಮತ್ತು ವಿದ್ಯಾಭ್ಯಾಸ

ಆಂಧ್ರಪ್ರದೇಶದಲ್ಲಿ ವೆಂಗಿನಾಡ ಎಂಬ ಅಡ್ಡಹೆಸರಿನ ತೈಲಂಗ ಬ್ರಾಹ್ಮಣನೊಬ್ಬನಿದ್ದನು. ಅವನ ಹೆಸರು ಪೇರುಭಟ್ಟ, ಲಕ್ಷ್ಮೀ ಅವನ ಹೆಂಡತಿ. ಇವರಿಬ್ಬರ ಸುಪುತ್ರನೇ ಜಗನ್ನಾಥ. ತನ್ನ ತಂದೆಯ ಸೊಲ್ಲು ಸರಸಸಲ್ಲಾಪ ಕೇಳಿ ಕಲ್ಲಿನಿಂದಾದರೂ ಅಮೃತ ಸುರಿಯುತ್ತಿತ್ತು. 'ಪಾಷಾಣಾದಪಿ ಪೀಯೂಷಂ ಸ್ಯಂದತೇ ಯತ್ರಭಾವತಃ । ತಂ ವಂದೇ ಪೇರು ಭಟ್ಟಾಖ್ಯಂ ಲಕ್ಷ್ಮೀಕಾತಂ ಮಹಾಗುರುಂ' ಎಂದು ಜಗನ್ನಾಥ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಜಗನ್ನಾಥನ ವಿದ್ಯಾಭ್ಯಾಸವೆಲ್ಲವೂ ಸರ್ವಶಾಸ್ತ್ರಪಂಡಿತನಾದ ಪೇರುಭಟ್ಟನಲ್ಲಿಯೇ ಆಯಿತು. ಹೀಗೆ ತಂದೆಯ ಪ್ರೀತಿಯ ಶಿಕ್ಷಣ ಪ್ರಭಾವದಿಂದ ಪ್ರತಿಭಾಶಾಲಿಯಾದ ಜಗನ್ನಾಥ ಚಿಕ್ಕವಯಸ್ಸಿನಲ್ಲಿಯೇ ಉದ್ದಂಡ ಪಂಡಿತನಾಗಿ ಆ ದೇಶದ ಪ್ರಚಂಡ ವಿದ್ವಾಂಸರನ್ನೆಲ್ಲ ವಾದ-ವೇದಿಕೆಗಳಲ್ಲಿ ಸೋಲಿಸಹತ್ತಿದ. ಹೋದಲ್ಲೆಲ್ಲ ಇವನ ವಿಜಯದುಂದುಭಿಯನ್ನು ಕೇಳಿದ ಮಹಾಮಹಾ ವಿದ್ವಾಂಸರೆಲ್ಲ ಚಂಡಕೌಶಿಕನಂತಿರುವ ಈ ಪಂಡಿತ-ಪುಂಡರೀಕನಿಗೆ ಹೆದರಿ ಸಮೀಪಕ್ಕೆ ಬಾರದಂತಾದರು. ಇನ್ನುಳಿದ ಸಾಧಾರಣ ಪಂಡಿತರು ತಮ್ಮ ಸೋಲನ್ನೊಪ್ಪಿಕೊಂಡು ಜಯಪತ್ರಗಳನ್ನು ಒಪ್ಪಿಸಿದರು. ಇಷ್ಟಾದರೂ ಜಗನ್ನಾಥನ ವಾದ-ಕುತೂಹಲ ಶಾಂತವಾಗಿರಲಿಲ್ಲ. ಪ್ರತಿಭಾ ಪಾಂಡಿತ್ಯ, ಪ್ರತಿಷ್ಠೆಗಳ ವಿಜಯೋನ್ಮಾದಿಂದ 'ನಖಾನಾಂ ಪಾಂಡಿತ್ಯಂ ಪ್ರಕಟಯತು ಕಸ್ಮಿನ್?' ಎಂದು ಕೊಬ್ಬಿ ಅಬ್ಬರಿಸುತ್ತಲೇ ಇದ್ದ.

## ಜಯಲಕ್ಷ್ಮೀ ಧನಲಕ್ಷ್ಮೀ

ಇಷ್ಟೆಲ್ಲ ಪೂರ್ಣ ಪಾಂಡಿತ್ಯ ಪ್ರತಿಷ್ಠೆಗಳಿದ್ದರೂ, ಅನೇಕ ವಾಕ್ಯಾರ್ಥ ಪ್ರತಿಯೋಗಿತೆಗಳಲ್ಲಿ ಜಗನ್ನಾಥನಿಗೆ ಜಯಲಕ್ಷ್ಮೀ ಮಾಲೆ ಹಾಕಿದ್ದರೂ ಧನಲಕ್ಷ್ಮೀ ಮಾತ್ರ ಮಾಲೆ ಹಾಕಿದ್ದಿಲ್ಲ. ಮನೆಯಲ್ಲಿ ನಿತ್ಯ ದಾರಿದ್ರ್ಯ ತಾಂಡವ ತಪ್ಪಿದ್ದಿಲ್ಲ. ಓದಿನ ಗಂಧಕೂಡ ಇಲ್ಲದ ಶಾರದಾ ಶತ್ರುಗಳ ಮನೆಗಳಲ್ಲಿ ಅಪರಂಪಾರವಾದ ಐಶ್ವರ್ಯ. ಆದರೆ ಸಾಕ್ಷಾತ್ ಶಾರದೆಯ ಅಪರಾವತಾರದಂತಿರುವ ವಿದ್ವಾಂಸರಿಗೆ ಮಧ್ಯಾಹ್ನಕ್ಕೆ ದಿಕ್ಕಿಲ್ಲ. ಈ ವೈಷಮ್ಯವನ್ನು ಕಂಡು ಕನಲಿ ಹೋದ ಜಗನ್ನಾಥ ಕೋಪ ಕೆರಳಿ ದೇವರ ಮೇಲೆ ಹರಿಹಾಯ್ದದ್ದುಂಟು ಭೂತಿರ್ನೀಚ ಗೃಹೇಷು ವಿಪ್ರಸದನೇ ದಾರಿದ್ರ್ಯ ಕೋಲಾಹಲಃ

ನಾಶೋ ಹಂತ ಸತಾಂ ಅಸತ್ ಪಥ ಝುಷಾಂ ಆಯುಃ ಶತಾನಾಂ ಶತಂ।
ದುರ್ನೀತಿಂ ತವ ವೀಕ್ಷ್ಯ ಕೋಪ ದಹನ ಜ್ವಾಲಾ ಜಟಾಲೋಽಪಿ ಸನ್ ।
ಕಿಂ ಕುರ್ವೇ ಜಗದೀಶ ಯತ್ ಪುನರಹಂ ದೀನೋ ಭವಾನೀಶ್ವರಃ ॥

ಅಯ್ಯೋ! ಮಾಡುವದೇನು! ನೀನು ಈಶ್ವರ ನಾನು ದೀನ. ನೀನು ಶಂಕರ ನಾನು ಕಿಂಕರ, ಇಲ್ಲದಿದ್ದರೆ ನೀಚರಲ್ಲಿ ಸಂಪತ್ತು. ಪಂಡಿತರಿಗೆಲ್ಲ ಆಪತ್ತು. ದುಃಖ ದಾರಿದ್ರ್ಯಗಳನ್ನು ಕೊಡುವ ನಿನ್ನನ್ನು ಒಂದು ಕೈ ನೋಡಿ ಬಿಡುತ್ತಿದ್ದೆ ಎಂಬ ಸಂತಾಪ ಸಿಡಿದ್ದೆದ್ದು ಕೈ ಕೈ ಹಿಸುಕಿಕೊಂಡಿದ್ದಾನೆ ಜಗನ್ನಾಥ. ತಮ್ಮ ದೇಶದ ರಾಜಧಾನಿಯಾದ ತಂಜಾವೂರದ ಅಧಿ ದೇವತೆಯನ್ನಂತೂ

ಖಂಚಾಯಿತೋಽ ಧಿಮತಿ ಗಂಜಾಪರೋಽ ಪಿ ಬತ ಸಂಜಾಯತೇಽತ್ರ ಧನದಃ
ಸಂಜಾಘಟೀತಿ ಗುಣಪುಂಜಾಯಿತಸ್ಯ ನತು ಗುಂಜಾಮಿತಂಚ ಕನಕಂ
ಕಿಂ ಜಾಗ್ರತೀ ಜಯಸಿ ಕೀಂ ಜಾನತೀ ಸ್ವಪಿಷಿ ಶಿಂಜಾನ ನೂಪುರ ಪದೇ
ತಂಜಾವರೇಶಿ ! ನವಕಂಜಾಕ್ಷಿ! ಜಾತು ತದಿದಂ ಜಾತು ವಾ ಕಿಮು ಶಿವೇ !

ತಾಯಿ! ತಂಜಾವರೇಶ್ವರಿ ! ನಿನಗೇನು ಕಣ್ಣೇ ಇಲ್ಲವೇ ? ಇದ್ದರೂ ನೋಡುವದಿಲ್ಲವೆ ? ನೋಡಿದರೂ ನೋಡದಂತೆ ಮಾಡುತ್ತಿರುವಿಯಾ? ಇದೇನು! ಬುದ್ಧಿ ಇಲ್ಲದ ಶುಂಠ, ಸೆರೆಗುಡುಕರೂ ಸಿರಿಸಂಪದಗಳಲ್ಲಿ ಲೋಲಾಡುತ್ತಿರುವರು. ವಿದ್ಯಾ ವಿನಯಶೀಲ ಸದಾಚಾರವುಳ್ಳವರ ಹತ್ತಿರ ಹೆಸರಿಗೂ ಇಲ್ಲ. ನೀನಿನ್ನೂ ಕಂಜಲೋಚನೆಯಾಗಿ ಎಚ್ಚರಿರುವಾಗ ಹೀಗಾಗಬೇಕೇ? ಎಂದು ಆಕ್ರೋಶ ಮಾಡಿದ್ದಾನೆ.

ಅರಸಿಕೇಷು ಕವಿತ್ವ ನಿವೇದನಂ
ಶಿರಸಿ ಮಾ ಲಿಖ ಮಾ ಲಿಖ ಮಾ ಲಿಖ

ಅವನ ವಕ್ರವಾದ ಈ ಆಕ್ರೋಶ ಆಕ್ರಂದನವನ್ನು ಕೇಳಿದರೆ ಜಗನ್ನಾಥ ಬಡತನದ ಬೇಗೆಯಲ್ಲಿ ಎಂಥ ಬವಣೆ ಬಟ್ಟಿದ್ದಾನೆ ಎಂಬುದರ ಕಲ್ಪನೆ ಬರಲು ಸಾಕು. ಮುಂದೆ ಅವನ ತನ್ನ ಪಾಂಡಿತ್ಯ, ಚಾಂಡಿತ್ಯ, ಔದ್ಧತ್ಯಗಳಿಂದ ಸಾಂಸಾರಿಕ ಸಮಸ್ಯೆಗಳು ಇನ್ನೂ ಜಟಿಲವಾಗುತ್ತಿರುವುದನ್ನು ಕಂಡು 'ವಿನಾಶ್ರಯಾ ನ ಶೋಭಂತೆ ಪಂಡಿತಾ ವನಿತಾ ಲತಾಃ' ಎಂಬಂತೆ ಎಲ್ಲಿಯಾದರೂ ರಾಜಾಶ್ರಯ ಪಡೆಯಬೇಕೆಂದು ಬಯಸಿದನು. ಆದರೆ ಸುಕುಮಾರ ಮತಿಗಳಾದ ರಾಜರ ಹತ್ತಿರ ತನ್ನ ಈ ಪ್ರಖರ ಪಾಂಡಿತ್ಯದಿಂದೇನು ಉಪಯೋಗ? ಅಲ್ಲಿ ಅವರ ಮನರಂಜನೆ ಮಾಡಲು ಸರಸ ಸಾಹಿತ್ಯವೇ ಬೇಕು. ಅದಕ್ಕಾಗಿ ತರ್ಕ ಕರ್ಕಶನಾದ ಆ ವಕ್ರ ವಿದ್ಯಾಧರನು ಕವಿತಾ ಕುಂಜದಲ್ಲಿ ಚುಂಚುಪ್ರವೇಶ ಮಾಡಲೆಂದು ಕುಂಚವನ್ನೆತ್ತಿದನು. 'ನ ಕಶ್ಚಿದ್ ಧೀಮತಾಮ್ ಅವಿಷಯೋ ನಾಮ' ಧೀಮಂತರ ಶ್ರೀಮಂತ ಬುದ್ಧಿಗೆ ಎಟುಕದ ವಿಷಯವಾವುದು ? "ತರ್ಕೇ ಕರ್ಕಶ ವಕ್ರವಾಕ್ಯ ಗಹನೇ ಯಾ ನಿಷ್ಠುರಾ ಭಾರತೀ। ಸಾ ಕಾವ್ಯೇ ಮೃದುಲೋಕ್ತಿ ಸಾರ ಸುರಭಾ ಸ್ಯಾದೇವ ಮೇ ಕೋಮಲಾ" ಎಂಬಂತೆ ಲೆಕ್ಕಣಿಕೆ ಎತ್ತಿ ಬರೆಯತೊಡಗಿದೊಡನೆ ವಾಣಿಯ ವೀಣೆಯ ತಂತಿಗಳನ್ನು ಮೀಟಿದಂತೆ ಮಧುರವಾದ ಮಿದು ಮಾತುಗಳು ಮಾಲೆಮಾಲೆಯಾಗಿ ಮೂಡಿ ಬರಹತ್ತಿದವು. ಇಂದಿನವರೆಗೆ ತನಗೇ ಗೊತ್ತಿಲ್ಲದ ತನ್ನ ಪದ್ಯಬಂಧಪ್ರಣಯನ ಪ್ರಾವೀಣ್ಯವನ್ನು ನೋಡಿ ತನ್ನಷ್ಟಕ್ಕೇ ತಾನೇ ಬೆರಗಾಗಿ ನಿಂತುಕೊಂಡ. ಬರೆಬರೆದಂತೆ ಭಾವ ಭಾಗೀರಥಿಯೇ ಅವನ ಪದ್ಯ ಪದ್ಧತಿಯಲ್ಲಿ ಇಳಿದು ಹರಿಯಹತ್ತಿದಳು.

ಈ ಸಾಹಿತ್ಯದ ಸ್ವಚ್ಛಂದ ಮಂದಾಕಿನಿಯನ್ನು ತನ್ನ ಕಾವ್ಯ ಕಮಂಡಲುವಿನಲ್ಲಿ ತುಂಬಿಕೊಂಡು ಜಗನ್ನಾಥ ಆಗಿನ ಆಂಧ್ರದೇಶಾಧಿಪತಿಯಲ್ಲಿ ಬಂದು –

ದೋರ್ದಂಡದ್ವಯ ಕುಂಡಲೀಕೃತ ಲಸತ್ ಕೋದಂಡ ಚಂಡಧ್ವನಿ–
ರ್ಧ್ವಸ್ತೋದ್ದಂಡ ವಿಪಕ್ಷಮಂಡಲ ಮಥ ತ್ವಾಂ ವೀಕ್ಷ್ಯ ಮಧ್ಯೇರಣಮ್ ॥
ವಲ್ಗದ್ ಗಾಂಡಿವ ಮುಕ್ತ ಕಾಂಡ ವಲಯ ಜ್ವಾಲಾಮುಖೀ ತಾಂಡವ
ಭ್ರಶ್ಯತ್ ಖಾಂಡವ ರುಷ್ಟಪಾಂಡವ ಮಹೋಕೋನಕ್ಷಿತೀಶಃ ಸ್ಮರೇತ್ ॥

ಎಂದು ಪ್ರಾಸಬದ್ಧವಾದ ಪದ ಪುಂಜರಂಜಿತ ಪದ್ಯ ಬಂಧದಿಂದ ಹೊಗಳಿಹಾಡಿ ಹರಸಿದನು. ಆದರೆ ಸಿರಿ–ಸೆರೆಗಳ ಮೋಹದ ಸೆರೆಯಲ್ಲಿ ಸಿಕ್ಕ ಆ ಅರಸಿಕ ಅರಸನು ಇತ್ತ ಗಮನವನ್ನೇ ಕೊಡಲಿಲ್ಲ. ಅರಸನ ಉಪೇಕ್ಷೆ ಜಗನ್ನಾಥನಲ್ಲಿ ನಿರಾಶೆಯನ್ನುಂಟುಮಾಡಿತು. ದರ್ಪದ ಸ್ಥಾನದಲ್ಲಿ ದೈನ್ಯವನ್ನು ಮೂಡಿಸಿತು.

## ಕವಿ ವೇದನೆ

ಪಂಡಿತರು ಅಸೂಯೆಯಿಂದ, ರಾಜರು ಧನಗರ್ವದಿಂದ, ಉದಾಸೀನರಾದರೆ ಕವಿ–ಕಾವ್ಯಗಳ ಗತಿಯೇನು?

ವಿದ್ವಾಂಸೋ ವಸುಧಾತಲೇ ಪರವಚಃ ಶ್ಲಾಘಾಸು ವಾಚಂಯಮಾಃ
ಭೂಪಾಲಾಃ ಕಮಲಾವಿಲಾಸ ಮದಿರೋನ್ಮೀಲನ್ಮದಾಘೂರ್ಣಿತಾಃ
ಆಸ್ಯೇ ಧಾಸ್ಯತಿ ಕಸ್ಯ ಲಾಸ್ಯಮಧುನಾ ಧನ್ಯಸ್ಯ ಕಾಮಾಲಸತ್
ಸರ್ವಾಮಾಧರ ಮಾಧುರೀಮಧರಯನ್ ವಾಚಾಂ ವಿಪಾತೋ ಮಮ ॥

ಸುರಸುಂದರಿಯರ ಅಧರದ ಮಧುರತೆಯನ್ನು ಹೀಯಾಳಿಸುವ ಈ ತನ್ನ ವಾಗ್ವಿಲಾಸವು ಯಾವ ರಸಿಕನ ತುಟಿತಟದಲ್ಲಿ ತಾಂಡವಗೈಯಬೇಕು? ಎಂದು ಹಲುಬಿದನು.

## ಕಾವ್ಯದ ಕೆಚ್ಚು

ಹೀಗೆ ಜ್ವಲಂತ ದಾರಿದ್ರ್ಯ, ವಿದ್ವಾಂಸರ ಮತ್ಸರ, ಅರಸರ ತಿರಸ್ಕಾರ ಮೂರೂ ಕೂಡಿ ತಿಕ್ಕಿಮುಕ್ಕುತ್ತಲಿದ್ದರೂ ಆ ಪಂಡಿತ ರಾಜನ ಮಾನ ಮುಕ್ಕಾಗಿದ್ದಿಲ್ಲ. ಒಂದೊಂದು ಸಲ ತನ್ನ ಕಾವ್ಯ ಕೌಶಲವನ್ನೆಲ್ಲ ಕಾನನ ಕೌಮುದಿಯೋ ಅರಣ್ಯ ರೋದನವೋ ಆದದ್ದನ್ನು ಕಂಡಾಗ ನಿರಾಶೆ ನಿಟ್ಟುಸಿರೆಳೆದರೂ ಅವನ ಕಾವ್ಯ ಕೆಚ್ಚು ಮತ್ತು ಕವಿತ್ವದ ಬಗೆಗೆ ಭವಭೂತಿಗೆ ಆತನಿಗಿರುವ ಆತ್ಮವಿಶ್ವಾಸ–

ಮದ್ವಾಣಿ ಮಾ ಕುರು ವಿಷಾದಮನಾದರೇಣ
ಮಾತ್ಸರ್ಯ ಭಗ್ನಮನಸಾಂ ತರಸಾ ಖಲಾನಾಮ್
ಕಾವ್ಯಾರವಿಂದ ಮಕರಂದ ಮಧುವ್ರತಾನಾಂ
ಆಸ್ಯೇಷು ದಾಸ್ಯಸಿತಮಾಮ್ ಕಿಯತೋ ವಿಲಾಸಾನ್ ॥

ಎಂಬ ವೀರ ವಚನೋದ್ಗಾರಕ್ಕೆ ಎಡೆಮಾಡಿಕೊಡುತ್ತಿತ್ತು.

ಭವಭೂತಿಯ ವಿಶ್ವಾಸದಲ್ಲಿ ಕಾಲಾತಿಪಾತ ಸಹಿಷ್ಣುತೆಯಿತ್ತು. ಆದರೆ ಜಗನ್ನಾಥ ಅವನಂತೆ ತನ್ನ ಕಾವ್ಯದ ಮನ್ನಣೆಗೆ ಕಾಲಾಂತರ ಜನ್ಮಾಂತರಗಳನ್ನು ಪ್ರತೀಕ್ಷಿಸುವಷ್ಟು ನಿರ್ಬಲ ಆತ್ಮವಿಶ್ವಾಸವುಳ್ಳವನಿರಲಿಲ್ಲ. ಅವನು 'ಕಾಲೋಹ್ಯಯಂ ನಿರವಧಿಃ ವಿಪುಲಾ ಚ ಪೃಥ್ವೀ' ಎಂದಂದು ಮುಂದಾದರೂ ನನ್ನ ಕಾವ್ಯರಸಾಸ್ವಾದನೆಯನ್ನು ಮಾಡುವಷ್ಟು ಸಹೃದಯತೆಯುಳ್ಳ ರಸಿಕ ಹುಟ್ಟಿಬಂದು ತನ್ನ ಕೃತಿಗಳನ್ನು ಓದಬಹುದೆಂದು ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡು ಕುಳಿತುಕೊಳ್ಳಲಿಲ್ಲ.

ತನ್ನ ಕಾವ್ಯರಸವನ್ನು ಆಚಮಿಸಿ ತಲೆತೂಗದವ 'ಅಧುನ್ವನ್ ಮೂರ್ಧಾನಂ ನೃಪಶುರಥವಾಯಂ ಪಶುಪತಿಃ' ಶುದ್ಧ ಪಶು ಎಂದು ಹೇಳುತ್ತಾನೆ.

ಗಿರಾಂ ದೇವೀ ವೀಣಾಗುಣರಣನ ಹೀನಾದರಕರಾ
ಯದೀಯಾನಾಂ ವಾಚಾಮಮೃತಮಯಮಾಚಾಮತಿ ರಸಮ್ ॥
ವಚಸ್ತಸ್ಯಾಕರ್ಣ್ಯ ಶ್ರವಣಸುಭಗಂ ಪಂಡಿತಪತೇಃ
ಅಧುನ್ವನ್ ಮೂರ್ಧಾನಂ ನೃಪಶುರಥವಾಯಂ ಪಶುಪತಿಃ ॥

## ವಿದ್ವಾನ್ ಸರ್ವತ್ರ ಪೂಜ್ಯತೆ

ಅದೇ ವೇಳೆಯಲ್ಲಿ ವಿಜಯನಗರದ ಸಾಮ್ರಾಜ್ಯ ಅಂತಃಕಲಹದಿಂದ ಮೊದಲನೇ ವೆಂಕಟನು ಮರಣ ಹೊಂದಿ ಅರಾಜಕತೆ ಉಂಟಾಗಿ ದೇಶದಲ್ಲೆಲ್ಲ ಪ್ರಕ್ಷುಬ್ಧ ಪರಿಸ್ಥಿತಿಯು ನಿರ್ಮಾಣವಾಗಿತ್ತು. ಆದ್ದರಿಂದ ಜಗನ್ನಾಥನು ಸ್ವದೇಶ ಬಿಟ್ಟು ರಜಪುತಾನದಲ್ಲಿರುವ ಜಯಪೂರಕ್ಕೆ ಬಂದನು. ಅಲ್ಲಿಯ ಜನರು ಅವನ ಪಾಂಡಿತ್ಯ, ಪ್ರತಿಭೆ, ಕವಿತ್ವ, ಕೌಶಲ್ಯಗಳನ್ನು ಕಂಡು ಆಶ್ಚರ್ಯಪಟ್ಟು ಆದರದಿಂದ ಉದಾರಾಶ್ರಯ ಕೊಟ್ಟರು. ಆಗ ಪಂಡಿತರಾಜನು ಅಲ್ಲಿ ಒಂದು ದೊಡ್ಡ ಪಾಠಶಾಲೆಯನ್ನು ಸ್ಥಾಪಿಸಿದನು. ಇವನ ವಿದ್ವತ್ತೆಯ ಖ್ಯಾತಿಯನ್ನು ಕೇಳಿ ಎಷ್ಟೋ ವಿದ್ಯಾರ್ಥಿಗಳು ಜಯಪೂರಕ್ಕೆ ಧಾವಿಸಿ ಜಗನ್ನಾಥನ ಶಿಷ್ಯತ್ವವನ್ನು ವಹಿಸಿದರು. ಉತ್ತರದ ಎಷ್ಟೋ ಪಂಡಿತರಿಗೆ ದಾಕ್ಷಿಣಾತ್ಯನಾದ ಈ ದ್ರಾವಿಡ ಪಂಡಿತನು ತಮ್ಮ ದೇಶದಲ್ಲಿ ಬಂದು ಪ್ರತಿಷ್ಠೆ ಗಳಿಸಿ, ಕುಲಪತಿಯಂತೆ ಮಹಾ ಪಾಠಶಾಲೆಯೊಂದನ್ನು ನಡೆಯಿಸುತ್ತಲಿರುವುದು ಮತ್ಸರದ ಕಿಡಿಕಿಚ್ಚಾಗುವಂತೆ ಮಾಡಿತ್ತು. ಅದರಲ್ಲಿಯೂ ಅಪ್ಪಯ್ಯ ದಿಕ್ಷೀತರ ಪೀಠ ಪ್ರಭಾವಳಿಯ ಪಂಡಿತ ಮಂಡಳಿಗಂತೂ ಉದಯೋನ್ಮುಖವಾದ ಈ ನವನಕ್ಷತ್ರ ದಾರುಣವಾದ ಧೂಮಕೇತುವಿನಂತೆ ತೋರಿತು.

## ಜಗನ್ನಾಥನ ಜಯಭೇರಿ

ಜಗನ್ನಾಥ ಜಯಪೂರದಲ್ಲಿದ್ದಾಗ ಉತ್ತರ ದೇಶದಲ್ಲಿ ಓರ್ವ ಮುಸಲ್ಮಾನ ಧರ್ಮಗುರು ಹಿಂದೂ ಪಂಡಿತರನ್ನೆಲ್ಲ ವಾದವಿವಾದದಲ್ಲಿ ಸೋಲಿಸಿ ಅನೇಕ ಜಯಪತ್ರಗಳನ್ನು ಸಂಪಾದಿಸಿ ದುರ್ಜೇಯನಾಗಿ ನಿಂತುಕೊಂಡಿದ್ದ. ಕಾಶಿಯಂಥ ವಿದ್ಯಾಕೇಂದ್ರದಲ್ಲಿಯೂ ಪಂಡಿತರನ್ನೆಲ್ಲ ಪರಾಜಯಗೊಳಿಸಿ 'ನಿರ್ವೀರಮ್ ಊರ್ವೀತಲಂ' ಎಂದು ಆರ್ಭಟಿಸುವ ಆ ಯುವನಾಚಾರ್ಯನ

ಜಯಭೇರಿಯನ್ನು ಕೇಳಿ ಜಗನ್ನಾಥ ಜಯಪೂರದಿಂದಲೇ ಗುಡುಗು ಹಾಕಿ ಕ್ಲುಪ್ತವಾದ ಸ್ವಲ್ಪ ದಿನಗಳಲ್ಲಿಯೇ ಅರಬ್ಬೀ ಭಾಷೆಯನ್ನು ಆಳವಾಗಿ ಅಭ್ಯಸಿಸಿ ಅಲ್ಲಿಯ ಶಾಸ್ತ್ರೀಯ ಉದ್ಗ್ರಂಥಗಳನ್ನೆಲ್ಲ ಅವಲೋಕಿಸಿ ಅದೇ ಭಾಷೆಯಲ್ಲಿಯೇ ಕಾಜಿಯಕೂಡ ಕಣಕ್ಕಿಳಿದ. ಜಗನ್ನಾಥನ ವಾದ ವೈಖರಿ, ಕೋಟಿಕ್ರಮ ಚಾತುರಿ, ಹಾಗೂ ನುಡಿತ ಹಿಡಿತಗಳನ್ನು ಕಂಡು ಕಾಜಿ ಕಕ್ಕಾವಿಕ್ಕಿಯಾದ. ಮಿಂಚಿನ ಮಂಚದಿಂದ ತೂರಿ ಬಂದಂತಿರುವ ಜಗನ್ನಾಥನ ಒಂದೊಂದು ನುಡಿಯೂ ಕಿಡಿಯಾಗಿ ಸಿಡಿಲಾಗಿ ಸಿಡಿದು ಕಾಜಿಯ ಘನ ಗರ್ವ ಗೌರವದ ಗೋಪುರವನ್ನು ನೆಲಸಮ ಮಾಡುತ್ತಲಿತ್ತು. ಜಗನ್ನಾಥನು ತನ್ನ ಪ್ರಚಂಡ ಪಾಂಡಿತ್ಯ ಹಾಗೂ ಉದ್ದಂಡ ಚಾಂಡಿತ್ಯದಿಂದ ವಿದ್ವತ್ ಪ್ರಪಂಚವನ್ನೇ ಗೆದ್ದು ದರ್ಪಿಷ್ಠ ದುರ್ಯೋಧನನಂತಾದ ಆ ಜಗಜಟ್ಟಿಯನ್ನು ಲೀಲಾಜಾಲವಾಗಿ ಸೋಲಿಸಿ ಜಯಪತ್ರವನ್ನು ಪಡೆದು ಹಿಂದೂ ಧರ್ಮದ ಜಯದುಂದುಭಿಯನ್ನು ಮೊಳಗಿಸಿದನು.

## ದಿಲ್ಲೀವಲ್ಲಭ ಪಾಣಿಪಲ್ಲವತಲೇ

ಜಗನ್ನಾಥನ ಇಂಥ ಲೋಕೋತ್ತರ ಪ್ರತಿಭೆ ಪಾಂಡಿತ್ಯ ಕವಿತ್ವಗಳನ್ನು ಆ ಕಾಜಿಯ ಬಾಯಿಂದ ಕೇಳಿ ಅಂದಿನ ದಿಲ್ಲಿಯ ಸಾಮ್ರಾಟನಾದ ಜಹಾಂಗೀರ ಬಾದಶಹನು ಅವನಿಗೆ ದಿಲ್ಲೀದರ್ಬಾರಕ್ಕೆ ಬರಲು ಆಮಂತ್ರಣ ಕೊಟ್ಟನು. ರಾಜಾತಿಥಿಯಾದ ಜಗನ್ನಾಥ ರಾಜಸ್ಥಾನದಲ್ಲಿ ಪ್ರವೇಶಮಾಡಿ ನೂರುದ್ದೀನ ಮಹಮ್ಮದ ಜಹಾಂಗೀರ ಬಾದಶಹನನ್ನು

ಶ್ಯಾಮಂ ಯಜ್ಞೋಪವೀತಂ ತವಕಿಮಿತಿ ಮಷೀಸಂಗಮಾತ್ ಕುತ್ರ ಜಾತಃ
ಸೋಯಂ ಶೀತಾಂಶುಕನ್ಯಾಪಯಸಿ ಕಥಮಭೂತ್ ತಜ್ಜಲಂ ಕಜ್ಜಲಾಕ್ತಮ್ ॥
ವ್ಯಾಕುಪ್ಯತ್ ನೂರದೀನ ಕ್ಷಿತಿರಮಣ–ರಿಪುಕ್ಷೋಣಿಭೃತ್ ಪಕ್ಷ್ಮಲಾಕ್ಷೀ
ಲಕ್ಷಾಕ್ಷೀಣಾಶ್ರುಧಾರಾ ಸಮುದಿತಸರಿತಾಂ ಸರ್ವತಃ ಸಂಗಮೇನ ॥

ಎಂದು ಭಾವಗರ್ಭಿತವಾಗಿ ಬಣ್ಣಿಸಿದನು. ಪಂಡಿತಪತಿಯ ಅಶುಕವಿತ್ವ ಪ್ರೌಢಪಾಂಡಿತ್ಯ ಸರಸಸಾಹಿತ್ಯ ಮಧುರಾಲಾಪಗಳು ರಾಜ ಹಾಗೂ ರಾಜಪರಿವಾರದವರನ್ನೆಲ್ಲ ಮುಗ್ಧರನ್ನಾಗಿ ಮಾಡಿಬಿಟ್ಟವು. ಹಿಂದಿ, ಸಂಸ್ಕೃತ ತೆಲುಗು, ತಮಿಳು, ರಾಜಸ್ಥಾನಿ, ಅರಬ್ಬೀ ಮೊದಲಾದ ಅನೇಕ ಭಾಷೆಗಳಲ್ಲಿ ಮುತ್ತು ಹುರಿದಂತೆ ಮಾತನಾಡಿ, ಕಾವ್ಯಮಾಡಿ, ವಿನೋದ ವಕ್ರೋಕ್ತಿಗಳಿಂದ

ಎಲ್ಲರನ್ನೂ ರಂಜಿಸುವ ಜಗನ್ನಾಥ ವಿಲಾಸಲಾಲಸರೂ ರಸಿಕರಾಜರೂ ಆದ ಮೊಗಲ ಸಾಮ್ರಾಟರ ಅಚ್ಚುಮೆಚ್ಚಿನ ಕವಿಯಾದ, ಸಲಹೆ ನೀಡುವ ಸಖನಾದ, ವಿಶ್ರಾಂತಿ ಸಮಯದ ವಿನೋದ ವಿದೂಷಕನಾದ, ಮತಧರ್ಮಗಳ ತಿರುಳು ತಿಳುಹುವ ಧರ್ಮಗುರುವಾದ, ನರ್ಮಸಚಿವನಾದ, ಏಕಾಂತಮಿತ್ರನಾದ. ಹೀಗೆ ವಿದ್ವತ್ತೆಯಿಂದ ಆಸ್ಥಾನದಲ್ಲಿ ಒಮ್ಮೆ ಸ್ಥಾನಪಡೆದ ಜಗನ್ನಾಥ ಕ್ರಮೇಣ ತನ್ನ ಮಧುರಾಲಾಪ ಹಾಗೂ ಆಕರ್ಷಕವಾದ ವ್ಯಕ್ತಿತ್ವ ಕವಿತ್ವಗಳಿಂದ ಅರಮನೆಯಲ್ಲಿ ಅಧಿಷ್ಠಾನ ಹೊಂದಿ ಕೆಲವೇ ದಿನಗಳಲ್ಲಿ ಅಂತಃಪುರ ಪರಿವಾರವರ್ಗಕ್ಕೆಲ್ಲ ಕಣ್ಮಣಿಯಾಗಿ ಕುಳಿತ.

## ಕಲೆಯ ಬಲೆ

ಚಾಣಾಕ್ಷನಾದ ಜಗನ್ನಾಥನು ಸಮ್ರಾಟ ಸಲೀಮ ಹಾಗೂ ಶಹಜಹಾನರ ಸ್ನೇಹಸೂತ್ರದ ನಾಮ ಮೂಲಗಳನ್ನೆಲ್ಲ ಸರಿಯಾಗಿ ತಿಳಿದುಕೊಂಡು ತೆರೆಯಮರೆಯ ಜನಾನಖಾನೆಯ ದ್ವಾರದಿಂದಲೂ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದ. ವಿಲಾಸಿಯಾದ ಜಹಾಂಗೀರನ ಆಳಿಕೆಯಲ್ಲಿ ರಾಜ್ಯಾಧಿಕಾರ ನೂರಜಹಾನಳದು ಇದ್ದಿತು. ಸ್ವತಃ ಸ್ತ್ರೀಯಾದುದರಿಂದ ಅವಳು ತನ್ನ ಸಹೋದರನಾದ ಅಸಫ್‌ಖಾನನಿಗೆ ಸರ್ವಾಧಿಕಾರವನ್ನು ಕೊಟ್ಟಿದ್ದಳು. ಆ ಅಸಫಖಾನನನ್ನು ಜಗನ್ನಾಥ ಅನೇಕ ಪದ್ಯಗಳಿಂದ ಸಂತೋಷಪಡಿಸಿ 'ಅಸಫ್‌ವಿಲಾಸ' ಎಂಬ ಒಂದು ಪ್ರತ್ಯೇಕ ಸುಂದರ ಗದ್ಯಕಾವ್ಯವನ್ನು ಬರೆದು ತನ್ನ ಕಲೆಯ ಬಲೆಯಲ್ಲಿ ಹಾಕಿಕೊಂಡಿದ್ದನು. ಆದ್ದರಿಂದ ಜಹಾಂಗೀರನ ಜೀವಮಾನದುದ್ದಕ್ಕೂ ಜಗನ್ನಾಥನ ರಾಜೋಪಚಾರಕ್ಕೆ ಕೊರತೆ ಇರಲಿಲ್ಲ. ಸಲೀಮನ ಅನಂತರದಲ್ಲಿ ನೂರಜಹಾನಳು ತನ್ನ ಮೊದಲಿನ ಗಂಡನಿಂದ ಹುಟ್ಟಿದ ಶಹರಿಯಾರ ಎಂಬ ಮಗನನ್ನು ದಿಲ್ಲಿಯ ಸಿಂಹಾಸನದ ಮೇಲೆ ಕೂಡಿಸಬೇಕೆಂದು ಜಹಾಂಗೀರನ ಉಳಿದೆಲ್ಲ ಮಕ್ಕಳನ್ನೂ ಸೋಲಿಸಿ ಓಡಿಸಿಬಿಟ್ಟಿದ್ದಳು. ನೂರಜಹಾನಳಿಂದ ಸೋತು ಪೆಟ್ಟುತಿಂದ ಶಹಾಜಹಾನನು ದಕ್ಷಿಣಕ್ಕೆ ಓಡಿಹೋಗಿದ್ದನು. ಬಾದಶಹನ ಮರಣಾನಂತರ ಅಸಫಖಾನನೇ ಸ್ವಾಮಿನಿಷ್ಠೆಯಿಂದ ತನ್ನ ಅಳಿಯನೇ ಆದ ಶಹಾಜಹಾನನ್ನು ಕರೆಕಳಿಸಿ ಅವನನ್ನು ಪಟ್ಟದ ಮೇಲೆ ಕೂಡಿಸಿದನು. ಶಹಾಜಹಾನನು ತಮ್ಮ ಮಾವನಾದ ಅಸಫನ ಉಪಕಾರವನ್ನು ಮನದಂದು ಅವನ ಅಧಿಕಾರ ಸ್ಥಾನ ಮಾನಗಳನ್ನು ಅನೂಚಾನವಾಗಿ ಪಾಲಿಸುತ್ತಿದ್ದನು. ಆ ಅಸಫನನ್ನು ಹಾಗೂ ಶಹಜಹಾನನ

ನೆಚ್ಚಿನ ಮಗನಾದ ದಾರಾಶುಕನನ್ನೂ ಜಗನ್ನಾಥನು ತನ್ನ ವಾಗ್ಝರಿಗೆ ವಿಷಯರನ್ನಾಗಿಸಿ ಜೀವಮಿತ್ರರನ್ನು ಮಾಡಿಕೊಂಡಿದ್ದನು. ಜಗನ್ನಾಥ ಅಸಫನನ್ನು ಬಣ್ಣಿಸಿದ ಬಗೆ ಬಹು ಹೃದಯಂಗಮವಾಗಿದೆ.

'ಸಮರಾರ್ಚಿತೋಽಪಿ ಅಮರಾರ್ಚಿತಃ' ಎಂದು ವಿರೋಧಾಭಾಸದಿಂದ ವರ್ಣಿಸಿ ಸಾರ್ವಭೌಮನ ಎಲ್ಲ ಸಾಮಂತರಾಜರಲ್ಲಿ, ವಾಙ್ಮಯದಲ್ಲಿ ಕಾವ್ಯದಂತೆ, ಕಾವ್ಯದಲ್ಲಿ ಧ್ವನಿಯಂತೆ, ಧ್ವನಿಯಲ್ಲಿ ರಸದಂತೆ, ರಸಗಳಲ್ಲಿ ಶೃಂಗಾರದಂತೆ, ಮಹಿಮೆಯಿಂದಲೂ ಮಧುರತೆಯಿಂದಲೂ ಅಸಫನೇ ಗೌರವಿಸಲ್ಪಡುತ್ತಿದ್ದನು ಎಂದು ಹೊಗಳಿದ್ದಾನೆ.

"ಸಾರ್ವಭೌಮ ಇವ ಸಾಮಂತೇಷು ವಾಙ್ಮಯೇಷು ಇವ ಕಾವ್ಯಕಲಾಪಃ, ಕಾವ್ಯಕಲಾಪೇಷು ಇವ ಧ್ವನಿಃ, ಧ್ವನಿಷು ಇವ ರಸಃ, ರಸೇಷು ಇವ ಶೃಂಗಾರಃ, ಸಕಲ ಸಹೃದಯಹೃದಯಂಗಮೇನ ಮಹಿಮ್ನಾ ಮಧುರಿಮ್ಣಾ ಚ ಸಂಭಾವಿತಃ ಸಕಲಶಾಸ್ತ್ರಸಾರಾವಗಾಹೀ ನವಾಬ ಅಸಫಜಾಹೀ"

## ಏಕಂ ಮಿತ್ರ ಭೂಪತಿರ್ವಾ........

ಇಂಥ ಅನೇಕ ಬಣ್ಣಬಣ್ಣದ ಮಾತುಕತೆ ಕೃತಿ ಸ್ತುತಿಗಳಿಂದ ಬಣ್ಣಿಸಿ ರಾಜನನ್ನೂ ರಾಜಪರಿವಾದವರನ್ನೂ ಮೆಚ್ಚಿಸಿ ಶಹಾಜಹಾನನಿಂದ 'ಪಂಡಿತರಾಜ' ಎಂಬ ಪದವಿಯನ್ನು ಪಡೆದನು. ರಾಜ ಕುಟುಂಬದಲ್ಲಿ ಪ್ರತಿಯೊಬ್ಬನೂ ಜಗನ್ನಾಥನ ಭೋಗಜೀವನದ ಮಧುಪಾತ್ರಕ್ಕೆ ರಸಪೂರಣವನ್ನು ಮಾಡುತ್ತಿದ್ದನು. 'ಏಕಂ ಮಿತ್ರಂ ಭೂಪತಿರ್ವಾ ಯತಿರ್ವಾ' ಎಂದು ಸರ್ವರೀತಿಯಿಂದ ಸಾಮ್ರಾಟನನ್ನೇ ಜೀವಮಿತ್ರನನ್ನಾಗಿ ಮಾಡಿಕೊಂಡು ಅವನು ಪೃಥ್ವೀರಾಜನಾದರೆ ತಾನು ಪಂಡಿತರಾಜನಾಗಿ ಮೆರೆದ.

## ಚದುರಂಗ ರಸರಂಗ

ಒಂದು ದಿನ ರಾಜಮಂದಿರದ ಚಂದ್ರಶಾಲೆಯಲ್ಲಿ ರತ್ನಗಂಬಳಿಯ ಮೇಲೆ ಶಹಾಜಹಾನ ಹಾಗೂ ಜಗನ್ನಾಥ ಇಬ್ಬರೂ ಚದುರಂಗ ಆಡುತ್ತಲಿದ್ದರು. ಆಟವು ಒಳ್ಳೇ ರಂಗಿಗೆ ಬಂದುದರಿಂದ ಇಬ್ಬರೂ ಹಸಿವೆ, ನೀರಡಿಕೆಯ ಪರಿವೆ ಇಲ್ಲದೆ ಕುಳಿತಿದ್ದರು. ಆಗ ಬಾದಶಹಾನಿಗೆ ನೀರಡಿಕೆಯಾಗಿ ಆಟ ಬಿಟ್ಟು ಏಳುವ ಮನಸ್ಸಿಲ್ಲದೇ ಕುಳಿತಲ್ಲಿಯೇ ತನ್ನ ಮುಂದೆ ತೊನೆದಾಡುತ್ತಲಿರುವ ಮುತ್ತಿನ ತೂಗುಗೊಂಡೆಯನ್ನು ಜಗ್ಗಿದ. ತಕ್ಷಣದಲ್ಲಿ ಅಂತಃಪುರದ ರಾಣೀವಾಸದಿಂದ

ತಿಳುವಾದ ತೆರೆಯ ಪರೆಯನ್ನು ಮೃದುವಾಗಿ ಓರೆ ಮಾಡಿ ತುಂಬುತಾರುಣ್ಯದ ಲಾವಣ್ಯಲಕ್ಷ್ಮೀಯೋರ್ವಳು ಚಿನ್ನದ ಹೂಜೆಯನ್ನು ತಲೆಯ ಮೇಲಿರಿಸಿ ಮೆಲ್ಲಡಿಯಿಡುತ್ತ ಪ್ರವೇಶಿಸಿದಳು. ರಾಜನ ಕೈಯಲ್ಲಿಯ ಚಿನ್ನದ ಚೆಂಬುವಿಗೆ ಹೊಂಗಲಶವನ್ನು ಬಗ್ಗಿಸುತ್ತಲಿರುವ ಆ ಅಪ್ಸರೆಯ ಮೈಸಿರಿ ಜಗನ್ನಾಥನ ಕವಿಹೃದಯವನ್ನು ಸೂರೆಗೊಂಡಿತು. ಬಂಗಾರದ ಬಟ್ಟಲಲ್ಲಿ ರಾಜ ನೀರು ಕುಡಿದರೆ ಕವಿ ತನ್ನ ಬೊಗಸೆಗಣ್ಣಿನಿಂದ ನೀರೆಯ ಚೆಲುವಿಕೆಯನ್ನು ಕುಡಿಯುತ್ತಲಿದ್ದ. ತನಿರಸದ ಪಾನೀಯ-ಪಾನಕ ಕುಡಿದು ತೃಪ್ತನಾದ ರಾಜ ಚದುರಂಗ ಬಿಟ್ಟು ಚದುರೆಯ ಅಂಗವನ್ನು ನಿರುಕಿಸುತ್ತಲಿರುವ ಕವೀಶ್ವರನನ್ನು ನೋಡಿ, ಕವಿರಾಜ ! ಹೊಂಗಲಶವನ್ನು ಹೊತ್ತುಕೊಂಡು ಹಿಂದಿರುಗಿ ಹೋಗುತ್ತಲಿರುವ ಈ ಮುಗುದೆಯಯನ್ನು ಬಣ್ಣಿಸಬಲ್ಲೆಯಾ? ಎಂದ. ಜಗನ್ನಾಥನ ಸ್ಫೂರ್ತಿ ಮಂದಾಕಿನಿಯ ಮುಚ್ಚಳವನ್ನೇ ತೆರೆದಂತಾಯಿತು. ಹಿಗ್ಗಿನ ಬುಗ್ಗೆಯೇ ಒಡೆದು ಶಬ್ದದ ಮೈಯಲ್ಲಿ ನುಗ್ಗಿ ಹರಿಯಿತು.

ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ
ಕುಸುಂಭಾರುಣಂ ಚಾರು ಚೇಲಂ ವಸಾನಾ
ಸಮಸ್ತಸ್ಯ ಲೋಕಸ್ಯ ಚೇತಃಪ್ರವೃತ್ತಿಂ
ಗೃಹೀತ್ವಾ ಘಟೇ ವಿನ್ಯಸ್ಯ ಯಾತೀವ ಭಾತಿ ॥

ಆಗ ಕವಿಯ ಸದ್ಯಃಸ್ಫುರಣದಿಂದ ಬಂದ ಈ ಸುಂದರ ಶ್ಲೋಕದ ಅರ್ಥಸ್ವಾರಸ್ಯವನ್ನು ತಿಳಿದ ರಸಿಕ ರಾಜನ ಹೃದಯ ಆನಂದದಿಂದ ಕುಣಿದಾಡಿತು. ಉಕ್ಕುತ್ತಲಿರುವ ಪ್ರಮೋದೋದ್ರೇಕದಲ್ಲಿ ಆ ಮಹಾಕವಿಯನ್ನು ಸ್ನೇಹಾತಿಶಯದಿಂದ ಬರಸೆಳೆದು ಬಿಗಿದಪ್ಪಿ ತನ್ನ ಐಶ್ವರ್ಯ ಸರ್ವಸ್ವವನ್ನೂ ಇಂಥ ಕವಿಜೀವನಕ್ಕೆ ಧಾರೆಯೆರಲೆಂದು ಭಾವಪರವಶತೆಯಲ್ಲಿ ಹೇಳಿದ ಬಾದಶಹ.

ರಾಜ – ಕವಿರಾಜ ! ನನ್ನ ಅರಮನೆಯ ಆನೆಗಳ ಬಳಗವೆಲ್ಲ ನಿನ್ನ ಮನೆ ಮುಂದೆ ತೂಗಲಿ.

ಕವಿ – ನ ಯಾಚೇ ಗಜಾಲೀಂ (ನನಗೆ ಆನೆಗಳ ಹಿಂಡುಬೇಡ)

ರಾಜ– ನನ್ನ ಎಲ್ಲ ಕುದುರೆ

ಕವಿ – ನ ವಾ ವಾಜಿರಾಜಿಂ (ಕುದುರೆಗಳೂ ಬೇಡ)

ರಾಜ – (ನಡುವೆ ಬಾಯಿ ಹಾಕಿ) ಎರಡೂ ಬೇಡಾದರೆ ದಿಲ್ಲೀಶ್ವರನ ಸಂಪತ್ ಸರ್ವಸ್ವ ?

ಕವಿ – ನ ವಿತ್ತೇಷು ಚಿತ್ತಂ ಮದೀಯಂ ಕದಾಪಿ

(ನಾನು ದುಡ್ಡನ್ನಂತೂ ಎಂದಿಗೂ ಅಪೇಕ್ಷಿಸುವುದಿಲ್ಲ)

ರಾಜ – ಹಾಗಾದರೆ ನೀನು ಬೇಡುವದಾದರೂ ಏನು? ಬೇಡು. ನನ್ನ ಹೃದಯವನ್ನೇ ಬೇಡಿದರೂ ನಿನಗೀಗ ಕೊಟ್ಟುಬಿಡುತ್ತೇನೆ. ಕೇಳು ಕವಿ! ಕೇಳು.

ಕವಿ – (ಮೆಲ್ಲನೆ ಹೆದರುತ್ತ) ಇಯಂ ಸುಸ್ತನೀ!

ರಾಜ – ಯಾರು! ಯಾವ ರಂಭಾ?

ಕವಿ – ಮಸ್ತಕನ್ಯಸ್ತಕುಂಭಾ........

ಲವಂಗೀ ಕುರಂಗೀ ದೃಗಂಗೀಕರೋತು (ಈ ಲವಂಗಿ ನನ್ನ ಕೈಹಿಡಿಯುವಂತೆ ಮಾಡು)

ಎಂದು ಸರಾಗವಾಗಿ ನುಡಿದನು.

ಬಾದಶಹ ಒಂದು ಕ್ಷಣ ಮೌನವಾಗಿ ವಿಚಾರಿಸಿ ಗಂಭೀರನಾಗಿ

ಕವಿರಾಜ! ಅವಳು ಯವನಿಯಲ್ಲವೆ? ನೀನು ಶಾಸ್ತ್ರ ಪಾರಂಗತನಾದ ಮಹಾಬ್ರಾಹ್ಮಣ, ಇವಳನ್ನು ಮದುವೆಯಾದರೆ ಇಲ್ಲಿಯೂ ಸುಖವಿಲ್ಲ. (ನಿಮ್ಮ ಧರ್ಮದಂತೆ) ಸತ್ತ ಮೇಲೆ ಸ್ವರ್ಗವೂ ಇಲ್ಲ. ಇದೆಲ್ಲವನ್ನು ವಿಚಾರಿಸಿದೆಯಾ! ಭಾವಸಮಾಧಿಯಲ್ಲಿದ್ದ ನಿನಗೆ ಎಚ್ಚರವಿಲ್ಲ, ಅವಳು 'ಯವನೀ' ಎಂದು ಗಟ್ಟಿಯಾಗಿ ಹೇಳಿದನು. ಅದೇ ಭಾವಾವೇಶದಲ್ಲಿ ಎದೆ ತುಂಬಿದ ಜಗನ್ನಾಥ ಪ್ರಣಯಸ್ಫೂರ್ತಿಯಿಂದಲೇ ನುಡಿದ

ಯವನೀ ನವನೀತ ಕೋಮಲಾಂಗೀ
ಶಯನೀಯೇ ಯದಿ ಲಭ್ಯತೇ ಕದಾಚಿತ್
ಅವನೀತಲಮೇವ ಸಾಧು ಮನ್ಯೇ
ನ ವನೀ ಮಾಘವನೀ ವಿನೋದ ಹೇತುಃ

ರಾಜ–ನಿನಗೆ ನಿನ್ನ ಜಾತಿಯಲ್ಲಿ ಸ್ತ್ರೀಯರಿಲ್ಲವೇ! ಈ ಯವನರಮಣಿಯಿಂದ ನಿನಗೆ ಮುಂದೆ ವಿಪತ್ತು ಬರಬಹುದು.

ಕವಿ–(ಅವನನ್ನು ಅರ್ಧಕ್ಕೆ ತಡೆದು ಆಶೆಯಿಂದ) ರಾಜನ್!

ಯವನೀ ರಮಣೀ ವಿಪದಃ ಶಮನೀ
ಕಮನೀಯತಮಾ ನವನೀತ ಸಮಾ
ಉಹಿ ಊಹಿ ವಚೋಮೃತಪೂರ್ಣ ಮುಖೀ
ಸ ಸುಖೀ ಜಗತೀ ಹ ಯದಂಕಗತಾ

## ಕವನಮೋಹಿತಾ ಯವನ ಕಾಮಿನಿ

ಆಗ ಬಾದಶಹನು ಪ್ರಸನ್ನನಾಗಿ ಅಲ್ಲಿಯೇ ಮೂಲೆಯಲ್ಲಿ ನಿಂತು ಈ ಕಾವ್ಯ ಪ್ರಸಂಗದಿಂದ ಕೆಂಪೇರಿದ ಚಂಚಲ ಕಣ್ಣಂಚಿನಿಂದ ತರುಣ ಕವಿಯ ತುಂಬು ಮೊಗದ ಸೊಬಗನ್ನು ಸವಿಯುತ್ತಲಿರುವ ಆ ಬಂಗಾರ ಕೊಡದ ಬೆಡಗುಗಾತಿಯನ್ನು ಕೈಹಿಡಿದು ಕರೆತಂದನು. ರೂಪಗುಣಗಳಿಂದ ಪರಸ್ಪರ ಅನುರಕ್ತರಾದ ಆ ಇಬ್ಬರೂ ಪ್ರಣಯಿಗಳನ್ನು ಕೈ ಕೈ ಕೂಡಿಸಿ ತುಂಬಿದ ಹೃದಯದಿಂದ ಅಂತಃಕರಣ ಪ್ರಕೃತಿಯವನಾದ ಸಾಮ್ರಾಟ್ 'ಸುಮೂಹೂರ್ತೇ ಸಾವಧಾನ' ಎಂದ. ಇಷ್ಟು ದಿನ ನೆರೆಮನೆಯ ಗೆಳೆಯನಾದ ಜಗನ್ನಾಥ ಅಂದು ಅರಮನೆಯ ಅಳಿಯನಾದ.

ಹಿಂದೂ ಧರ್ಮದ ಉಚ್ಚವರ್ಗದಲ್ಲಿ ಹುಟ್ಟಿ ವೇದ ವೇದಾಂತ ಪಾರಂಗತನಾದ ಶಿಷ್ಟ ಬ್ರಾಹ್ಮಣನೊಬ್ಬ ಯವನ ಯುವತಿ ಸಂಗದಿಂದ ಒಂದು ವಿಷ ಮುಹೂರ್ತದಲ್ಲಿ ಜಾತಿ ಭ್ರಷ್ಟನಾದ ಅಧಃಪತಿತನಾದ. ಕಾಶಿಯಲ್ಲಿದ್ದ ಅಪ್ಪಯ್ಯ ದಿಕ್ಷೀತರು ತಮ್ಮ ದೇಶದವನಾದ ಜಗನ್ನಾಥನ ಈ ಅಧಃಪತನವನ್ನು ಕೇಳಿ ಮಮ್ಮಲ ಮರುಗಿದರು. ದೀಕ್ಷಿತರು ತಮ್ಮ ಶೀಲ, ಸದಾಚಾರ, ತಪಸ್ಸು ಚಾರಿತ್ರ್ಯಗಳಿಂದ ಉತ್ತರ ದೇಶದಲ್ಲೆಲ್ಲ ಗುರು ಗೌರವವನ್ನು ಪಡೆದಿದ್ದರು. ಇಡೀ ಕಾಶೀ ಖಂಡವೆಲ್ಲ ಅವರ ಪಾಂಡಿತ್ಯದಿಂದ ಪಾದಾಕ್ರಾಂತವಾಗಿ 'ಶಿಷ್ಯಸ್ತೇಹಂ' ಎಂದು ಬಾಗಿತ್ತು. ಅದೇ ದ್ರವಿಡ ದೇಶದವನಾದ ಜಗನ್ನಾಥನ ಜಯಪೂರ ದಿಗ್ವಿಜಯವನ್ನು ಕೇಳಿ ಸಮಸ್ತ ಉತ್ತರಾಪಥವೇ ದಕ್ಷಿಣ ಪ್ರತಿಭೆಗೆ ಮಾರುಹೋಗಿತ್ತು. ಆದರೆ ಜಗನ್ನಾಥನ ಈ ಶೀಲಭ್ರಂಶವನ್ನು ಕೇಳಿ ತಮ್ಮ ದಕ್ಷಿಣದ ಕೀರ್ತಿಗೆ ಕಲಂಕ ಬಂದಿತೆಂದು ದೀಕ್ಷಿತರ ಪರಿವಾರದವರೆಲ್ಲ ಪಂಡಿತರಾಜನ ಈ ಗರ್ಹ್ಯಕೃತ್ಯವನ್ನು ಖಂಡಿಸಿದರು ಪರಿಪತ್ರಗಳಿಂದ ಪ್ರತಿಭಟಿಸಿದರು.

## ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ

ಇತ್ತ ಜಗನ್ನಾಥನ ಆಯುಷ್ಯದಲ್ಲಿ ಭೋಗ ಜೀವನದ ಮತ್ತೊಂದು ಬಾಗಿಲು ತೆರೆಯಿತು. ವಿಲಾಸಲಾಲಸನಾದ ಮೊಗಲ ಸಾಮ್ರಾಟನ ಅಂತಃಪುರದ ಅಳಿಯನಾಗಿ, ಅಲ್ಲಿಯ ಶೃಂಗಾರರಂಗಮಹಲಿನಲ್ಲಿ ತನ್ನ ಕವಿಕಲ್ಪನೆಯ ಕನಸುಗಳನ್ನೆಲ್ಲ ಸತ್ಯಸೃಷ್ಟಿಯಲ್ಲಿಳಿಸಿ ಕಂಡು ಉಂಡು ತೃಪ್ತಿಪಟ್ಟ. ತುಂಬುತಾರುಣ್ಯ, ಅಪೇಕ್ಷಿಸಿದ ಲಾವಣ್ಯ, ರಸಿಕಳಾಗಿ ಒಲಿದು ಬಂದು ರಾಗಿಣಿಯಾದ ರಮಣಿ, ಮನದಲ್ಲಿ ಮೂಡಿದ ಬಯಕೆಗಳನ್ನೆಲ್ಲ ಕೂಡಲೇ ಪೂರೈಯಿಸಿ ಬಿಡುವ

ಸಾರ್ವಭೌಮಸಂಪತ್ತು, ಅಧಿಕಾರ, ಪ್ರತಿಷ್ಠೆ, ಕವಿತ್ವ, ರಸಿಕತೆ, ರಾಜಭೋಗ, ರಸಯೋಗ, ಏತಕ್ಕೆ ಕೊರತೆ! 'ಅವನೀತಲಮೇವ ಸಾಧುಮನ್ಯೇ ನ ವನೀ ಮಾಘವನೀ ವಿನೋದಹೇತುಃ'. ಇಂದ್ರನ ನಂದನವನಕ್ಕಿಂತ ಈ ಭೂಲೋಕವೇ ಮೇಲು ಎಂದು ಪದೇ ಪದೇ ಎನ್ನುವಂತಾಯಿತು. ಇಂಥ ಸೌಭಾಗ್ಯ ಸಂಪತ್ತು ಸುಖ ಸಮೃದ್ಧವಾದ ತುಂಬು ಜೀವನವನ್ನು ಇಬ್ಬರು ಸಮ್ರಾಟರ ಜೀವಮಾನದುದ್ದಕ್ಕೂ ಜಗನ್ನಾಥ ಅನುಭವಿಸಿದ.

## ಜೀವನಸಂಧ್ಯಾ

ಮುಂದೆ ಶಹಾಜಹಾನನ ಅಂತಿಮ ದಿನಗಳಲ್ಲಿ ಜಗನ್ನಾಥನ ಶೃಂಗಾರ ಜೀವನದ ಸಂಧ್ಯಾಕಾಲ ಪ್ರಾರಂಭವಾಯಿತು. ಅವನ ಅತ್ಯಂತ ಪ್ರಿಯಮಿತ್ರನೂ ಧನಿಯೂ ಆದ ಅಸಫಖಾನನು ತೀರಿಕೊಂಡನು. ಇದರಿಂದ ಜಗನ್ನಾಥನಿಗೆ ವಜ್ರಾಘಾತವಾದಂತಾಗಿ ದೀನನಾಗಿ ವಿಲಪಿಸಿದ್ದಾನೆ.

ಯುಕ್ತಂತು ಯಾತೇ ದಿವಮಾಸಫೇಂದೌ ತದಾಶ್ರಿತಾನಾಂ ಯದಭೂದ್ವಿನಾಶಃ ಈ ಮರಣದಿಂದ ಅಸಫನಿಗೆ ನಾಶವಿಲ್ಲ. ಯಾಕೆಂದರೆ ಅವನು ಸ್ವರ್ಗಕ್ಕೇರಿದ. ನಿಜವಾದ ವಿನಾಶವೆಂದರೆ ಇಲ್ಲಿದ್ದ ಅವನ ಆಶ್ರಿತರಿಗೆ ಮಾತ್ರ.

ಮುಂದೆ ಹಿಂದೂ ಧರ್ಮ ಪಕ್ಷಪಾತಿ ಆದ ದಾರಾಶುಕನ ಕೊಲೆಯಿಂದಂತೂ ಜಗನ್ನಾಥ ನೆಲೆ ತಪ್ಪಿದ ಹಕ್ಕಿಯಾದ. ದಾರಾನಿಗೆ ಪಟ್ಟವಾಗಿದ್ದರೆ ಜಗನ್ನಾಥ ಜೀವನದಲ್ಲಿ ಬಿಸಿಲನ್ನು ಕಾಣುವ ಪ್ರಸಗಂವೇ ಬರುತ್ತಿರಲಿಲ್ಲ. ಔರಂಗಜೇಬನ ಆಳ್ವಿಕೆ ಅವನ ಬಾಳಿನ ಬೆಳದಿಂಗಳಿನಲ್ಲಿ ಬೆಂಕಿಯನ್ನೇ ಸುರಿದಿತ್ತು.

## ಒಲವೆ ನಮ್ಮ ಬದುಕು

ಹಿಂದೂ ಶಬ್ದವನ್ನೇ ದ್ವೇಷಿಸುವ ಧರ್ಮಾಂಧ ಔರಂಗಜೇಬನ ಶಾಸನ ಶುರುವಾದಕೂಡಲೇ ಜಗನ್ನಾಥ ದಿಲ್ಲಿಯ ದೆಹಲಿಯನ್ನು ದಾಟಿದ. ಲವಂಗಿಗೆ ಬೇಕಾದರೆ ವೃದ್ಧಾಪ್ಯದಲ್ಲಿ ಸುಖವಾಗಿ ರಾಜಕುಟುಂಬದಲ್ಲಿ ಇರಲು ಹೇಳಿದ. ಆದರೆ ರಾಜಪೂತ ಸ್ತ್ರೀಯಿಂದ ಹುಟ್ಟಿ ಹಿಂದೂ ಬ್ರಾಹ್ಮಣನೊಬ್ಬನ ಕೈಹಿಡಿದ ಲವಂಗಿ ಮದುವೆ ಆಗುವಾಗ ಯವನಿಯಾದರೂ ಕೆಲದಿನಗಳಲ್ಲಿಯೇ ಶುದ್ಧ ವೈದಿಕಮುತ್ತೈದೆಯಾಗಿಬಿಟ್ಟಿದ್ದಳು. ಪತಿಯು ಅವಳ ಪ್ರಿಯದೇವತೆಯಾದರೆ ಬಾಲಗೋಪಾಲ ಕೃಷ್ಣ ಅವಳ ಉಪಾಸ್ಯದೇವತೆಯಾಗಿದ್ದ. ತನ್ನ ಆಪ್ತ ಇಷ್ಟ ಬಂಧು ಬಳಗದವರನ್ನೆಲ್ಲ ಬಿಟ್ಟು ರಾಜೈಶ್ವರ್ಯವನ್ನೆಲ್ಲ ತೊರೆದು, ಉಟ್ಟಸೀರೆಯ

ಮೇಲೆಯೇ ಪತಿಯ ಬೆನ್ನುಹತ್ತಿ ಬಂದು, ಬಡತನದ ಬೇಗೆಯಲ್ಲಿ ಕಾಷ್ಠಭಕ್ಷಣಕ್ಕೂ ಸಿದ್ಧಳಾದಳು. ಮುಂದೆ ಜಗನ್ನಾಥ ಕೆಲವು ದಿನ ಕಾಮರೂಪದ ಅಧಿಪತಿಯಾದ ಪ್ರಾಣನಾರಾಯಣನ ಆಶ್ರಯದಲ್ಲಿದ್ದ.

## ಬಹಿಷ್ಕಾರದ ಬ್ರಹ್ಮಾಸ್ತ್ರ

ಔರಂಗಜೇಬನ ಶಾಸನದಲ್ಲಿ ಅವನೂ ಪುಡಿಯಾದ ಬಳಿಕ ಜಗನ್ನಾಥ ಪೂರ್ಣ ನಿರಾಧಾರನಾದ. ಹಿಂದೂಗಳೆಲ್ಲ ಅವನಿಗೆ ಬಹಿಷ್ಕಾರ ಹಾಕಿದ್ದರು. ರಾಜಾಶ್ರಯವೂ ತಪ್ಪಿಹೋಯಿತು. ಇತೋ ಭ್ರಷ್ಟತತೋಭ್ರಷ್ಟನಾಗಿ ದೇಶ ದೇಶ ಅಲೆದ. ಮಧುರಾ ಪಟ್ಟಣದಲ್ಲಿ ಕೆಲದಿನ ಇದ್ದು ಪಶ್ಚಾತ್ತಾಪದಗ್ಧನಾಗಿ ಕೃಷ್ಣನನ್ನು 'ಮುಕುಂದ ಮುಖಚಂದಿರೇ ಚಿರಮಿದಂ ಚಕೋರಾಯತಾಮ್' ಎಂದು ಬೇಡಿಕೊಂಡ.

ಅಲ್ಲಿಯೂ ಬ್ರಾಹ್ಮಣರ ಬಹಿಷ್ಕಾರದ ಬ್ರಹ್ಮಾಸ್ತ್ರ ಬೆನ್ನು ಹತ್ತಿತ್ತು.

## ಹತವಿಧಿಲಸಿತಾನಾಂ ಹೀ ವಿಚಿತ್ರೋ ವಿಪಾಕಃ

ಕೊನೆಗೆ ಲವಂಗಿಯೊಡನೆ ಊರು ಊರು ಅಲೆಯುತ್ತ ಜಗನ್ನಾಥ ಕಾಶಿಗೆ ಬಂದ. ಅಲ್ಲಿರುವ ಪಂಡಿತ ಪರಿಷತ್ತಿಗೆ ಪಶ್ಚಾತ್ತಾಪದಗ್ಧನಾದ ತನ್ನನ್ನು ಉದ್ಧರಿಸಿರೆಂದು ಬೇಡಿಕೊಂಡ. ಅವರು ಇವನನ್ನು ಕಂಡೇ ಅಸಹ್ಯಪಟ್ಟುಕೊಂಡು 'ಶಾಂತಂ ಪಾಪಂ' ಎಂದರು. ಉದ್ಧಾರದ ಮಾತಂತೂ 'ಅಬ್ರಹ್ಮಣ್ಯಮ್ ಅಬ್ರಹ್ಮಣ್ಯಮ್' ದೂರ ಉಳಿಯಿತು. ಕಾಶಿಯ ವಿಶ್ವನಾಥನ ದರ್ಶನಕ್ಕೆ ಹೋದಾಗ ಪಂಡಾಗಳ ಪುಂಡತನ ಜಗನ್ನಾಥನ ಕತ್ತಿಗೆ ಕೈಕೊಟ್ಟಿತು. ಬ್ರಾಹ್ಮಣರ ಬೀದಿಯಲ್ಲಂತೂ ಮನೆ ಮನೆಗೆ ಛೀ, ಥೂ, ಧಿಕ್ಕಾರ, ತಿರಸ್ಕಾರ ಬಹಿಷ್ಕಾರ, ಗುಡಿ-ಗುಂಡಾರ ಛತ್ರ ಧರ್ಮಶಾಲೆ ಎಲ್ಲೆಲ್ಲಿಯೂ ನಿಲ್ಲಲು ಸ್ಥಳಕೊಡಲಿಲ್ಲ. ಊರೆಲ್ಲ ಭಿಕ್ಷೆಬೇಡಿದರೂ ಮುಕ್ಕು ಕಾಳು ದೊರಕಲಿಲ್ಲ. ನೀರಡಿಸಿ ಬಿಕ್ಕಿದರೂ ಹನಿ ನೀರು ಹಾಕಲು ದಿಕ್ಕಿಲ್ಲ. ಎಲ್ಲಿ ನೋಡಿದಲ್ಲೆಲ್ಲ 'ಯವನೀ ಸಂಸರ್ಗ ಪಾಂಸುಲ', 'ಹಿಂದೂ ಕುಲಕಲಂಕ', 'ಬ್ರಾಹ್ಮಣಾಧಮ', 'ಲವಂಗೀ ಲಂಪಟ' ನಡೆ ಹೋಗು, ದೂರ ಸರಿ, ತೊಲಗು ಮುಂತಾದ ಧಿಕ್ಕಾರ ಧ್ವನಿಗಳೇ ಕೇಳಬರಹತ್ತಿದವು. ಹೀಗೆ ಸಾಯಂಕಾಲದ ವರೆಗೂ ಅಂಡಲೆದು ಹಸಿವೆಯಿಂದ ಕುಸಿದು, ಕೂಡಲು ಸ್ಥಳವಿಲ್ಲದೇ ನಿಲ್ಲಲು ನೆಲವಿಲ್ಲದೆ ದುಖಃದಿಂದ ಬೆಂದು ಧಿಕ್ಕಾರಗಳಿಂದ ನೊಂದು, ಕೊನೆಗೆ ರಾತ್ರಿಯಲ್ಲಿ ಗಂಗೆಯ ಘಾಟಗೆ ಬಂದರು.

ಅಲ್ಲಿ ಹಸಿವೆಯ ಕಸಿವಿಸಿಯನ್ನು ತಾಳದೇ ಆಯಾಸಕ್ಕೆ ಕಣ್ಣುಮುಚ್ಚಿದವು. ಹೊದ್ದುಕೊಳ್ಳುವ ಅರಿವೆಯ ತುಂಡೊಂದನ್ನು ಅರ್ಧ ಹಾಸಿ ಅದನ್ನೇ ಹೊದ್ದುಕೊಂಡು ಹೊಟ್ಟೆಯಲ್ಲಿ ಕಾಲುಮಡಚಿಕೊಂಡು ಬಾಣನೆಟ್ಟಹಕ್ಕಿಯಂತೆ ಪ್ರೇತಪ್ರಾಯರಾಗಿ ಆ ನಿತ್ರಾಣ ದಂಪತಿಗಳು ಮುದುಡಿಕೊಂಡು ಮಲಗಿದರು. ಹಾಯ್ ಹಾಯ್! ಸರ್ವಶಾಸ್ತ್ರಪಾರಂಗತನೂ ಕವಿರಾಜನೂ ಆದ ಉದ್ದಂಡ ಪಂಡಿತನಿಗೆ ಎಂಥ ಅವಸ್ಥೆ! ಒಂದಾನೊಂದು ಕಾಲದಲ್ಲಿ ದಿಲ್ಲೀಶ್ವರನ ಅಂಗೈಲಿಂಗವಾಗಿ, ಅರಮನೆಯ ಅರಗಿಣಿಯಾಗಿ ಸಾಮ್ರಾಜ್ಯಲಕ್ಷ್ಮಿ ತೂಗಿದ ಶೃಂಗಾರರಂಗಮಂಚದ ಅಷ್ಟೈಶ್ವರ್ಯಗಳಲ್ಲಿ ಉಯ್ಯಾಲೆಯಾಡಿದ ಪಂಡಿತರಾಜನೆತ್ತ! ಇಂದಿನ ಹಾದಿ-ಬೀದಿಯ ಹುಚ್ಚರೂ ಕೂಡ ಬೈದು, ತೆಗಳಿ, ಉಗುಳಿ, ಹೊರಗಟ್ಟಿ ಗೆಂಗೆಯಘಾಟಿನ ಮೇಲೆ ನೆಲ ಹಾಸಿ, ಮುಗಿಲು ಹೊದ್ದು ಬಿದ್ದುಕೊಂಡಿರುವ ಅನಾಥ ಜಗನ್ನಾಥನೆತ್ತ! 'ಹತವಿಧಿಲಸಿತಾನಾಂ ಹೀ ವಿಚಿತ್ರೋ ವಿಪಾಕಃ'.

## ಗಂಗಾ ತಟಾಕದಲ್ಲಿ

ಕಾಶಿಯಲ್ಲಿಯ ಅರುಣೋದಯ. ಸಂಧ್ಯಾರುಣನ ಕೆಂಗಿರಣಕೋಲುಗುಂಟ ಸುರಸಂದರಿಯರೂ ಕೂಡ ಗಂಗಾಸ್ನಾನಕ್ಕೆ ಇಳಿಯುವ ಸಂದರ್ಭ. ಆ ಮಂದಾಕಿನಿಯ ನೀರಿನಲ್ಲಿ ಮೊದಲು ಮಿಂದು ಬಂದ ಮಂದಾನಿಲ ಉಷಃಸ್ನಾನಕ್ಕೆ ಬರುವವರನ್ನೆಲ್ಲ ಸುಗಂಧದಿಂದ ಸ್ವಾಗತಿಸುತ್ತಲಿದೆ. ಆಗ ಊರಲ್ಲಿಯ ಒಳ್ಳೇ ಕರ್ಮಠ ಧರ್ಮ ಗುರುಗಳಾದ ಶ್ರೀ ಅಪ್ಪಯ್ಯದೀಕ್ಷಿತರು ಸ್ನಾನ ಮಾಡಿಕೊಂಡು ತಿರುಗಿ ಹೊರಟಿದ್ದಾರೆ. ಬಾಲರವಿಯ ಅರುಣ ಕಿರಣಗಳು ಗಂಗಾಘಾಟಿನ ಮೇಲೆ ಸುವರ್ಣ ರೇಖೆಗಳನ್ನು ಮೂಡಿಸುತ್ತಲಿವೆ. ಕೈಯಲ್ಲಿ ಕಲಶ ತುಂಬಿಕೊಂಡು ಮಂತ್ರಗಳನ್ನು ಉಚ್ಚರಿಸುತ್ತ ನಡೆದ ಆ ದೀಕ್ಷಿತರು ಘಾಟ ಹತ್ತಿ ಮೇಲೆ ಬರುವಾಗ ಸ್ನಾನಕ್ಕೆ ಇಳಿಯುವ ಜನರೆಲ್ಲ ಸಾಷ್ಟಾಂಗ ವಂದಿಸಿ ಮುಂದೆ ಸಾಗುತ್ತಲಿದ್ದಾರೆ. ಮೇಲೆ ಬಂದ ದೀಕ್ಷಿತರು ಅಲ್ಲಿಯೇ ಮೂಲೆಯಲ್ಲಿ ಹರಕು ಅರಿವೆ ತುಣಕೊಂದನ್ನು ಮೋರೆಯ ಮೇಲೆ ಎಳೆದುಕೊಂಡು ಬೆಳಗಾದರೂ ಇನ್ನೂ ಜೋಡಾಗಿ ಮಲಗಿದ ಆ ನಿರ್ಲಜ್ಜ ದಂಪತಿಗಳನ್ನು ಅಚ್ಚರಿಯಿಂದ ನಿರುಕಿಸುತ್ತ ನಿಂತುಬಿಟ್ಟರು. ಶತಛಿದ್ರವಾದ ದರಿದ್ರ ವಸ್ತ್ರಖಂಡದೊಳಗಿಂದ ಆ ಸುಪ್ತವ್ಯಕ್ತಿಯ ಬಿಳಿಕೂದಲನ್ನು ಕಂಡ ಮೇಲಂತೂ ಅವರ ಕೋಪ ಕೆರಳಿತು. ಆಗ ದೀಕ್ಷಿತರೆಂದರೆ ಕಾಶೀಖಂಡದ ಅನಭಿಷಿಕ್ತ ರಾಜರು, ಬಿಳಿಶಾಟೆಯ ಜಗದ್ಗುರುಗಳು. ಊರಲ್ಲಿಯ

ಬೇಕಾದವರನ್ನು ಶಾಪಿಸುವ ಅಧಿಕಾರ ಅವರಿಗೆ ಅವರ ಪಾಂಡಿತ್ಯ ತಪಸ್ಸುಗಳಿಂದ ಸ್ವಯಂ ಪ್ರಾಪ್ತವಾಗಿತ್ತು. ಅಂತೆಯೇ ಅವರು ಗಡಸು ಅಧಿಕಾರ ಧ್ವನಿಯಿಂದಲೇ ಗರ್ಜಿಸಿದರು.

ಕಿಂ ನಿಃಶಂಕಂ ಶೇಷೇ ಶೇಷೇ ವಯಸಿ ತ್ವಮಾಗತೇ ಮೃತ್ಯಾ

ಎಲ್ಲೆಲ್ಲಿಂದಲೋ ಜನ ಜಾಹ್ನವೀ ಸ್ನಾನಕ್ಕೆಂದು ಬರುವಾಗ ನೀನಿನ್ನೂ ಬೆಳಗಾದರೂ ಮಲಗಿರುವೆಯಲ್ಲ! ಅದೂ ಇಷ್ಟು ಜನರು ಓಡಾಡುವಾಗ! ಹೆಂಡತಿಯೊಡನೆ! ಏಕಶಯ್ಯೆಯಲ್ಲಿ! ಅದೂ ಇಂಥ ಮುಪ್ಪಿನ ಕಾಲದಲ್ಲಿ ! ಛೇ ಯಾರು ನೀನು ? ಎದ್ದೇಳು! ಹೀಗೇಕೆ ಮಲಗಿರುವಿ? ಎಂದು ಅಬ್ಬರಿಸಿದರು. ಆಗ ಜಗನ್ನಾಥ ಏಳಲಿಕ್ಕೂ ತ್ರಾಣವಿಲ್ಲದೇ ಮಲಗಿದಲ್ಲಿಯೇ ಮೆಲ್ಲನೇ ಮುಸುಕು ತೆಗೆದ. ಜಗನ್ನಾಥ! ತಮ್ಮ ಗ್ರಂಥಗಳನ್ನೆಲ್ಲ ಅಕ್ಷರಶಃ ಖಂಡಿಸಿ ಒಗೆದ ಖಂಡಪರಶು! ಚಂಡಕೌಶಿಕ! ದೀಕ್ಷಿತರು ತಬ್ಬಿಬ್ಬಾದರು, ಮತ್ತೆ ಉಗುಳುನುಂಗಿ ಅಧೀರಧ್ವನಿಯಲ್ಲಿ 'ಅಥವಾ ಸುಖಂ ಶಯೀಥಾಃತವ ನಿಕಟೇ ಜಾಗರ್ತಿಜಾಹ್ನವೀಜನನೀ' ಇಲ್ಲ, ಇಲ್ಲ. ಸುಖವಾಗಿ ಮಲಗು. ನೀನು ಮಲಗಿದರೂ ನಿನ್ನ ಮಗ್ಗುಲಲ್ಲಿ ನಿನ್ನ ತಾಯಿ ನಿಮ್ಮಂಥವರನ್ನೆಲ್ಲ ಉದ್ಧರಿಸಲು ನಿತ್ಯ ಜಾಗರೂಕಳೇ ಆಗಿ ಕುಳಿತಿದ್ದಾಳೆ ಎಂದಂದು ಗಡಿಬಿಡಿಯಿಂದ ಮುಂದೆ ಸಾಗಿದರು.

## ವರಂ ವಿರೋಧೋಪಿ ಸಮಂ ಮಹಾತ್ಮಭೀಃ

ಜಗನ್ನಾಥ ಎದ್ದು ಕುಳಿತ. ಯಾವುದೋ ಆಕಾಶವಾಣಿ ಅವನಿಗೆ ತಾರಕ ಮಂತ್ರವನ್ನು ಉಪದೇಶಿಸಿದಂತಾಯಿತು. ದಿಕ್ಷೀತರು ಅಂದ 'ತವ ನಿಕಟೇ ಜಾಗರ್ತಿ ಜಾಹ್ನವೀ ಜನನೀ' ಎಂಬ ಮಾತು ನಿಜ. ನಾನು ಮಲಗಿದರೂ ಅಶಕ್ತವಾದ ಮಗುವಿನ ಆರೈಕೆಗಾಗಿ ತಾಯಿ ಬೆಳತನಕ ಎಚ್ಚರಿರುವಂತೆ ನನಗಾಗಿ ಗಂಗಾತಾಯಿ ಎಚ್ಚರಿಕೆಯಿಂದ ಕುಳಿತಿದ್ದಾಳೆ. ಅವಳು ನನ್ನ ಮುಂದೇ ಕುಳಿತರೂ ನಾನು ಮಾತ್ರ ಅವಳ ಕಡೆ ಮುಖ ತಿರುವಿ ಮಲಗಿದೆ. ದೀಕ್ಷಿತರು ನನ್ನ ವೈರಿಗಳಾದರೂ ಮುಕ್ತಿಮಾರ್ಗ ತೋರಿ ಉಪಕರಿಸಿದರು. ಜಗತ್ತೆಲ್ಲ ಜಗನ್ನಾಥನನ್ನು ಜರೆದರೂ ಸ್ವಕೀಯರೆಲ್ಲರೂ ತೊರೆದರೂ, ತಾಯ್ಗರುಳು ಮಾತ್ರ ತೊರೆಯುವುದು ಸಾಧ್ಯವಿಲ್ಲ. ದೀನ ದಲಿತ ಧಿಃಕೃತ ಹಾಗೂ ಪತಿತ ಪಾಖಂಡಿಯಾದ ನನಗೆ ಆ ತಾಯಿಯನ್ನು ಬಿಟ್ಟರೆ ಬೇರಿನ್ನಾರು ಗತಿ? ಯಾರು ಬಿಟ್ಟರೂ ನಾನು ಎಷ್ಟೇ ದುಷ್ಟ ಭ್ರಷ್ಟನಾದರೂ ಅವಳು ಮಾತ್ರ ನನ್ನನ್ನು ಬಿಡಲು ಸಾಧ್ಯವಿಲ್ಲ. 'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಈ ದಾರಿದ್ರ್ಯ ದುಃಖ ಧಿಕ್ಕಾರಗಳ

ದಳ್ಳುರಿಯಿಂದ ದಗ್ಧವಾದ ನನ್ನ ಮೈಯುರಿ ಶಾಂತವಾಗುವುದು ಗಂಗೆಯ ತಾಯೊಡಲಿನ ಆ ಮಡು ಮಡಿಲಿನಲ್ಲಿಯೇ ಸರಿ. 'ಲವಂಗಿ! ಏಳು. ಒಮ್ಮೆ ಈ ತಾಯೊಡಲ ತಂಪಿಗಿಳಿದು ಈ ಜಗತ್ತಿನ ಜಂಜಾಟದಿಂದ ದೂರವಾಗುವಾ' ಎಂದು ಎದ್ದನು. ಅವಮಾನದ ಅಗ್ನಿಕುಂಡದಲ್ಲಿ ಪ್ರತಿದಿನವೂ ಜ್ವಾಲಾ ಪ್ರಸಾದವನ್ನು ಉಂಡು ನೋವಿನ ನಂಜಿನಿಂದ ನಲುಗಿ ಹೋದ ಲವಂಗಿಯೂ ಜಲಸಮಾಧಿಗೆ ಸಿದ್ಧಳಾಗಿ ಎದ್ದು ನಿಂತಳು. ಇಬ್ಬರೂ ತಾಯಿಯ ತೋಳಿನಾಸರೆಗಾಗಿ ಪಾವಟಿಗೆಗಳನ್ನು ಇಳಿಯಹತ್ತಿದರು.

## ಶೋಕಃ ಶ್ಲೋಕತ್ವಮಾಗತಃ

ಜನರೆಲ್ಲ ಯವನೀ ಸಂಸರ್ಗದಿಂದ ಪತಿತನಾದ ಆ ಪಾಪ ಪುರುಷ ತಮ್ಮ ಮಡಿಯಾದ ಮೈಮೇಲೆ ನೆರಳು ಹಾಕಿ, ನೀರು ಮುಟ್ಟಿ ಗಂಗಾಜಲವನ್ನೇ ಮೈಲಿಗೆಮಾಡುವನೆಂದು ಕೂಗಹತ್ತಿದರು. ಕೆಲ ಸಾಹಸಿಗರಂತೂ ಎಲೋ ಮಹಾಪಂಡಿತ ! ಈಗ ನಮ್ಮ ಸ್ನಾನವಾಗುವವರೆಗೆ ನೀನು ಗಂಗೆಯನ್ನು ಮುಟ್ಟಬೇಡ, ಕೆಳಗಿಳಿಯಲೂ ಬೇಡ ಅಲ್ಲಿಯೇ ಕೂಡು ಎಂದು ಗಟ್ಟಿಯಾಗಿ ಗದರಿಸಿದರು. ಗಾಬರಿಯಾದ ಜಗನ್ನಾಥ ಘಾಟಿನ ಮೇಲೆಯೇ ಕುಕ್ಕರಿಬಿದ್ದ. ಹಸಿವೆ, ಕಸಿವಿಸಿ, ಅವಮಾನಗಳು ಅವನ ಪಂಚಪ್ರಾಣಗಳನ್ನು ಹೀರಲು ನಾ ಮುಂದೆ ತಾ ಮುಂದೆ ಎಂದು ಮೇಲಾಟ ನಡೆಸಿದ್ದವು. ಲವಂಗಿ ಉದ್‌ಭ್ರಾಂತಳಾಗಿ ಕಲ್ಲಫಡೆಯಮೇಲೆ ಉರುಳಿ ಮೂರ್ಛಿತನಾದ ಪತಿಯನ್ನು ಗಾಳಿಹಾಕಿ ಎಬ್ಬಿಸಿ ಕೂಡಿಸಿದಳು. ಎಚ್ಚೆತ್ತ ಜಗನ್ನಾಥನ ಮನಸ್ಸು ಪ್ರಶಾಂತವಾಗಿತ್ತು. ಅಂತಃಕರಣ ಪ್ರಸನ್ನವಾಗಿತ್ತು. ಹೃದಯದಲ್ಲಿಯ ರಾಗ, ದ್ವೇಷ, ಈರ್ಷೆ, ಕೋಪ ಕಾಲುಷ್ಯವೆಲ್ಲ ಸುಟ್ಟು ಅಂತರಂಗ ಗಂಗೆಯತರಂಗತಾಣದಂತೆ ನಿರ್ಮಲವಾಗಿತ್ತು. ಕರುಳೆಲ್ಲ ಕರಗಿ, ಶೋಕದಿಂದ ಕೊರಗಿ, ಹೃದಯವು ಮರುಗಿ, ಭಾವಾಕಾಶದಲ್ಲಿ ಭಕ್ತಿಪ್ರವಾಹ ಉಕ್ಕೇರುತ್ತಲಿತ್ತು. ಎದುರಿಗೆ ಜಗತ್ತಿನ ಪುಣ್ಯವೇ ಶಿವಸಲಿಲಸ್ವರೂಪದಿಂದ ಗಂಗೆಯಾಗಿ ಹರಿಯುತ್ತಿದೆ. ನಾಲ್ಕು ಹೆಜ್ಜೆಯಲ್ಲಿಯೇ ಹೆಜ್ಜೇನು ಝುರಿಯಾಗಿ ಹರಿಯುತ್ತಿದ್ದರೂ ಅದರ ಒಂದು ಹನಿಯನ್ನು ಹಿಡಿಯಲು ಒಂದು ತೊಟ್ಟನ್ನು ಮುಟ್ಟಲೂ ತನಗೆ ಅಧಿಕಾರವಿಲ್ಲ. ಆದರೂ ಅವಳ ದರ್ಶನವಾದರೂ ಸಿಕ್ಕಿತಲ್ಲ! ಯಾರೂ ಗಂಗೆಯನ್ನು ನೋಡಬೇಡವೆಂದು ನನ್ನ ಕಣ್ಣು ಕಟ್ಟಿಲ್ಲ. ಇಷ್ಟೇ ನನ್ನ ಭಾಗ್ಯ. 'ತಾಯಿ! ನಿನ್ನ ಸ್ಪರ್ಶನದ ಭಾಗ್ಯವಿಲ್ಲದಿದ್ದರೂ ದರ್ಶನದ ಲಾಭವಾದರೂ ಆಯಿತಷ್ಟೇ! ಅಗೋ ಅಲ್ಲಿ ಕಾಣುವ ಆ ನಿನ್ನ ಜಲರಾಶಿಯ ಸೌಂದರ್ಯವಂತೂ

ಸುಧೆಯಂತಿದೆ. ಅದರ ಸ್ವಾರಸ್ಯ ನನಗೆ ತಿಳಿಯದು. ನನ್ನ ಕಣ್ಣಿಗೆ ಕಾಣುವ ಆ ನಿನ್ನ ದೃಶ್ಯರೂಪ, ಆ ಸುಧಾಸೌಂದರ್ಯ ಅಷ್ಟೇ ಸಾಕು. ಅದಷ್ಟೇ ನನ್ನ ಅಶಿವಗಳನೆಲ್ಲ ಕಳೆಯಲು ಬೇಕಾದ ಹಾಗೆ ಸಮರ್ಥವಿದೆ. ಈ ಜನ್ಮದಲ್ಲಿ ನಿನ್ನ ಸ್ನಾನ ಪಾನ ಸಿಗದಿದ್ದರೂ ಗಾನ ದರ್ಶನಗಳೇ ನನ್ನ ಭಾಗದ ಪರಮ ಭಾಗ್ಯ ಸಮೃದ್ಧ ಸೌಭಾಗ್ಯ.

ಸಮೃದ್ಧಂ ಸೌಭಾಗ್ಯಂ ಸಕಲ ವಸುಧಾಯಾಃ ಕಿಮಪಿ ತನ್
ಮಹೈಶ್ವರ್ಯಂ ಲೀಲಾಜನಿತ ಜಗತಃ ಖಂಡಪರಶೋಃ ॥
ಶೃತೀನಾಂ ಸರ್ವಸ್ವಂ ಸುಕೃತಮಥ ಮೂರ್ತಂ ಸಮನಸಾಂ
ಸುಧಾಸೌಂದರ್ಯಂ ತೇ ಸಲಿಲಮಶಿವಂ ನಃ ಶಮಯತು ॥

ಜಗದ ಭಾಗ್ಯ ಜನಕೆಲ್ಲ ಭೋಗ್ಯ ಸೌಭಾಗ್ಯಪೂರ್ಣ ಸಿರಿಯು ।
ಲೀಲೆಯಿಂದ ಜಗಜನಿಪ ಶಿವನ ಐಸಿರಿಯು ದಿವ್ಯ ತೊರೆಯು ॥
ವೇದಸಾರಸರ್ವಸ್ವ ದೇವಕುಲ ಪುಣ್ಯ ಮೂರ್ತಿಮಂತ ।
ಅಮೃತ ಕಾಂತಿಸವಿಸಲಿಲ ಸವೆಸಲೆಮ್ಮೆಲ್ಲ ಭವದುರಂತ ॥

ಅಂದಿನವರೆಗೆ ಹೃದಯುದಲ್ಲಿ ಕೂಡಿಬಿದ್ದ ತಾಪಶೋಕಗಳೆಲ್ಲ ಶ್ಲೋಕರೂಪವಾಗಿ ಆ ಗಂಗಾ ಪ್ರವಾಹದಂತೆಯೇ ನಿರರ್ಗಳವಾಗಿ ಹರಿಯಹತ್ತಿತು. ಶರಪಂಜರದಲ್ಲಿದ್ದ ಭೀಷ್ಮರು ನೀರೆಂದಾಗ ಅರ್ಜುನನ ಬಾಣ ಪ್ರಹಾರಕ್ಕೆ ನೆಲದೆಡೆಯಿಂದ ಪುಟಿದೇಳುವ ಪಾತಾಳಗಂಗೆಯಂತೆ ಪ್ರತಿಯೊಂದು ಪದ್ಯವೂ ಕವಿಯ ಹೃದಯದಾಳದಿಂದ ಹೊಮ್ಮಿ ಕಾವ್ಯಕಾರಂಜಿ ಚಿಮ್ಮಿ ಬರತೊಡಗಿತು. ಭಾವಾವೇಶ ಪಾರವಶ್ಯತೆಯಲ್ಲಿ ಯಾವುದನ್ನೂ ಯೋಚಿಸದೇ ಆರ್ತನಾಗಿ ಉದ್ಗಕ್ಕೂ ಅನ್ನುತ್ತ ನಡೆದಿದ್ದರೂ ಭಾವೋಚಿತವಾದ ಸುಂದರ ಶಬ್ದಗಳು ತಾವಾಗಿಯೇ ಅಂದವಾಗಿ ಹೊಂದಿಕೊಂಡು ಗುತ್ತಾಗಿ ಪ್ರಾಸಾನುಸ್ಯೂತವಾಗಿ ನಿಲ್ಲುತ್ತಿದ್ದವು.

ದರಿದ್ರಾಣಾಂ ದೈನ್ಯಂ ದುರಿತಮಥ ದುರ್ವಾಸನಹೃದಾಂ
ದ್ರುತಂ ದೂರೀಕುರ್ವನ್ ಸಕೃದಪಿ ಗತೋದೃಷ್ಟಿಸರಣಿಮ್

ಪ್ರಯುತ್ನವಿಲ್ಲದೇ ತಾವಾಗಿ ಕೂಡಿಬಂದ ಇಂಥ ಮಧುರ ಪದಬಂಧಬಂಧುರತೆ ಹಾಗೂ ಶಬ್ದ ಸಂದರ್ಭದ ಸುಂದರತೆಗಳು ಜಗನ್ನಾಥನ ಕಾವ್ಯಸಿದ್ಧಿಯನ್ನೂ, ಶಬ್ದಾನುಶಾಸನ ಸಾಮರ್ಥ್ಯವನ್ನೂ, ಬಲವತ್ತರವಾದ ಸಾಹಿತ್ಯ ಶಾಸ್ತ್ರ ಸಂಸ್ಕಾರಗಳನ್ನೂ ಎತ್ತಿತೋರುತ್ತವೆ.

ಸಮುಚಿತವಾದ ಸಾರ್ಥಕ ಶಬ್ದ-ಶಕ್ತಿ ಮಹಿಮೆಯಿಂದ ಭಾವಾನುರೂಪವಾದ ಪ್ರತಿಮಾಸಂವಿಧಾನದಲ್ಲಿ ಈ ಕವಿ ಸಿದ್ಧಹಸ್ತ. ಎಂಥ ವಿಕ್ಷಿಪ್ತ-ಸಂಕೀರ್ಣ ಭಾವವನ್ನಾದರೂ ಸಮರ್ಥನಾದ ಈ ಕವಿ ಶಾಬ್ದಿಕ ಸಲಕರಣೆಗಳಿಂದ ಸಜೀವವಾದ ಚಾರುಚಿತ್ರವನ್ನಾಗಿ ಕೊರೆದು ನಿಲ್ಲಿಸಬಲ್ಲ, ಬರೆದು ತೋರಿಸಬಲ್ಲ.

ಆ ಸಂದರ್ಭದಲ್ಲಿ ಅದೇ ಸೂರ್ಯೋದಯವಾಗುತ್ತಲಿತ್ತು. ಬಾಲಸೂರ್ಯನ ಹೊಂಗಿರಣಗಳು ಗಾಳಿಕೇಳಿಗೆ ಅಲ್ಲೋಲಕಲ್ಲೋಲವಾದ ಗಂಗಾ ತರಂಗಗಳಲ್ಲಿ ಪ್ರತಿಫಲಿತವಾಗಿವೆ. ಈ ಸುಂದರ ಸನ್ನಿವೇಶವನ್ನು ಕವಿ ತನ್ನ ಶಬ್ದ ಶರೀರದಲ್ಲಿ ಸೆರೆಹಿಡಿದು, ಉತ್ಪ್ರೇಕ್ಷೆಯ ನಕ್ಷೆಯನ್ನು ಬಿಡಿಸಿ ಮತ್ತಿಷ್ಟೂ ಮನೋಹರವಾಗಿ ಸಹೃದಯರ  ಕಣ್ಣೆದುರು ಕಟ್ಟುವಂತೆ ಮಾಡುತ್ತಾನೆ.

ಉದಂಚನ್-ಮಾರ್ತಂಡ-ಸ್ಫುಟ-ಕಪಟ-ಹೇರಂಬ-ಜನನೀ
ಕಟಾಕ್ಷ-ವ್ಯಾಕ್ಷೇಪ-ಕ್ಷಣ-ಜನಿತ-ಸಂಕ್ಷೋಭ-ನಿವಹಾಃ
ಭವಂತು ತ್ವಂಗಂತೋ ಹರ ಶಿರಸಿ ಗಂಗಾ ತನುಭವಃ
ತರಂಗಾಃ ಪ್ರೋತ್ತುಂಗಾ ದುರಿತ ಭವಭಂಗಾಯ ಭವತಾಮ್

ತನ್ನ ಗಂಡನ ತಲೆಯ ಮೇಲೆ ಲೀಲಾತಾಂಡವ ನಡೆಸಿದ ಗಂಗೆಯನ್ನು ಕಂಡು ಪಾರ್ವತಿಯು ಸವತಿ ಮಾತ್ಸರ್ಯದಿಂದ ಉದಯಿಸಿರುವ ಸೂರ್ಯಬಿಂಬದಂತೆ ಕೆಂಪಡರಿದ ಕಣ್ಣಿನಿಂದ ನೋಡಿದಾಗ ಗಂಗೆಯ ಒಡಲಿನಲ್ಲಿ ಭಯಂಕರ ತಳಮಳವೇಳುತ್ತಿದೆ. ಇದನ್ನೇ 'ಕಟಾಕ್ಷವ್ಯಾಕ್ಷೇಪಕ್ಷಣಜನಿತ ಸಂಕ್ಷೋಭ ನಿವಹಾಃ' ಎಂದು ಹೇಳಿದಾಗ ಇಲ್ಲಿಯ ಕ್ಷ ಕಾರ ಪ್ರಾಸದಿಂದ ಆ ಕಲ್ಲೋಲ ಕೋಲಾಹಲದ ವೀಚಿಕ್ಷೋಭವನ್ನು ಕಿವಿಯಿಂದಲೇ ನೋಡಿದಂತಾಗುತ್ತದೆ. ಹಾಗೂ ಇಲ್ಲಿ 'ತರಂಗಾಃ ಪ್ರೋತ್ತುಂಗಾಃ ದುರಿತ ಭವಭಂಗಾಯ ಭವತಾಮ್' ಎಂಬ ಶಬ್ದಮೃದಂಗದ ಮಂಗಲ ಧ್ವನಿಯನ್ನು ಆಲಿಸಿದಾಗ ಶಿವನ ತಲೆಯ ಮೇಲೆ ಹರಿದಾಡುವ ಆ ಗಂಗೆಯ ಮಂಗಲ ಪ್ರವಾಹ ನಮ್ಮ ಕಣ್ಣೆದುರೇ ತರಂಗಿತವಾದಂತೆ ಎನಿಸುತ್ತದೆ. ಹೀಗೆ ಈ ಕಾವ್ಯದುದ್ದಕ್ಕೂ ಶಬ್ದಗಾರುಡಿ ಓದುಗರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ.

ಮೂಲದ ಈ ಸಮಗ್ರ ಭಾವವನ್ನು ಇಡಿಯಾಗಿ ಕನ್ನಡಿಸುವುದು ಸಾಧ್ಯವಿಲ್ಲದಿದ್ದರೂ ಆ ಶಬ್ದತೂಕವಾದರೂ ಬಂದರೆ ಅರ್ಥ ಗಮ್ಯವಾಗಬಹುದೆಂದು ಇಲ್ಲಿ ಪ್ರಯತ್ನಿಸಲಾಗಿದೆ.

ರೋಷ ದುಂಬಿದಂಬಿಕೆಯ ಬೆಳಗು ಮಾರ್ತಂಡರಾಗಚಂಡ-

ಕೆಂಡ ಕುಂಡ ಕೆಂಗಣ್ಣ ತಾಕಿ ಖಳಖಳಿಪ ದಿವ್ಯ ಹೊಂಡ ॥
ಹರನ ಶಿರದಿ ಮೊರೆ ಮೊರೆದು ಮೆರೆದು ನೊರೆ ನೊರೆದು ನೆರೆಯನೊರೆವ
ತಾರೆಯೂರ ತೊರೆ ತೆರೆಗಳಳಿಸಲಮ್ಮೆಲ್ಲ ದುರಿತಭರವ

ಇದರಂತೆ ಇಲ್ಲಿಯ ಪ್ರತಿಯೊಂದು ಪದ್ಯದಲ್ಲಿಯೂ ಭಕ್ತಿಯ ಉದ್ರಿಕ್ತ ಅವಸ್ಥೆಯಲ್ಲಿ ಕವಿಯ ಕಲ್ಪನಾಶಕ್ತಿ ತನ್ನ ಬಣ್ಣಬಣ್ಣದ ಅಮೃತಕುಂಚವನ್ನು ಆಡಿಸಿದ್ದರಿಂದ ಇದೊಂದು ಕೇವಲ ಭಕ್ತಿಪರ ಮಂತ್ರ-ಸ್ತೋತ್ರವಾಗದೇ ಉತ್ತಮೋತ್ತಮವಾದ ಭಾವಗೀತದ ಎತ್ತರಕ್ಕೆ ಹತ್ತಿನಿಂತಿದೆ.

ಅಂಬ ನಿನ್ನ ಆಲಂಬ ನಂಬಿ ನಾನುಬ್ಬಿ ಸೊಕ್ಕಿ
ಲೆಕ್ಕವಿಲದ ಸುರಗಣವ ಹಳಿದೆ ಲೆಕ್ಕಿಸದೆ ಗರುವವುಕ್ಕಿ
ಇಂದು ತಾಯೆ! ನೀನೆನ್ನ ತೊರೆಯೆ ಸುರತೊರೆಯೆ ಮಗುವ ಮರೆಯೆ
ದೀನ ನಾನು ಗತಿಹೀನನಕಟ ಆರೆದರು ಅಳಲಿ ಪೊರೆಯೆ ?

ಈ ಪದ್ಯದ ಭಾವಪೇಶಲತೆ ಮಟ್ಟಿದರೆ ಮಾಸುವಂತೆ ವಿವರಿಸಲೂ ಸಾಧ್ಯವಿಲ್ಲದಷ್ಟು ಸೂಕ್ಷ್ಮ ಹಾಗೂ ಅತ್ಯುನ್ನತವಾಗಿದೆ. ಭಾಗೀರಥಿ ಸ್ನಾನಫಲವನ್ನು 'ಗಂಗಾ ಗಂಗೇತಿ ಯೋಬ್ರೂಯಾತ್' । ಎಂದು ಮುಂತಾಗಿ ಹೇಳದೇ ಕವಿ ಬಹು ಚಮತ್ಕಾರವಾದ ರೀತಿಯಲ್ಲಿ ಹೇಳಿದ್ದಾನೆ. ಇಲ್ಲಿ ಸ್ನಾನ ಕರ್ತವ್ಯ ಮೊದಲಾದ ಶಬ್ದಗಳನ್ನು ಉಚ್ಚರಿಸದೇ ಎಂಥ ನಾಸ್ತಿಕನಿಗೂ ಗಂಗಾಸ್ನಾನ ಮಾಡುವ ಬುದ್ಧಿಹುಟ್ಟುವಂತೆ ಮಾಡುತ್ತಾನೆ.

ಅರುಣ ಉದಿಸೆ ಮೈತೊಳೆದ ತರುಣ ರಾಜನ್ಯರಸಿಕರಮಣಿ
ನೀರು ಸಾರೆ ಕತ್ತುರಿಯು ಜಾರೆ ಕುಚವೇರೆ ತುಂತುರ-ಮಣಿ
ಪುಣ್ಯ ಚಿಗುರಿ ಮೈನಿಮಿರಿ ಚಿಗರಿ ಸುರಪುರವಿಮಾನವೇರಿ
ಸಗ್ಗಸೇರಿ ನಂದನವ ಸಾರಿ ವಿಹರಿಪವು ಸುರಶರೀರಿ ॥

ರಾಜರಮಣೀಯರು ಸ್ನಾನಕ್ಕೆ ಇಳಿದಾಗ ಅವರ ಎದೆಗೆ ಹಚ್ಚಿದ ಕಸ್ತೂರಿಯು ಗಂಗಾ ನೀರಿಗೆ ತಾಕುವುದೊಂದೇ ತಡ, ಯಾವುದೋ ಗುಡ್ಡದ ದರಿ ಕೊರಿಗಳಲ್ಲಿ ಗತಪ್ರಾಣರಾದ ಆ ಕಸ್ತೂರಿ ಮೃಗಗಳನ್ನು ದೇವದೂತರು ಹುಡುಕಿ ಪುಷ್ಪಕ ವಿಮಾನದಲ್ಲಿ ಸಂಭ್ರಮದಿಂದ ಏರಿಸಿ ಸ್ವರ್ಗಕ್ಕೆ ಕರೆದೊಯ್ದು ದಿವ್ಯರೂಪದಿಂದ ಅವು ನಂದನ ವನದಲ್ಲಿ ವಿಹರಿಸುವಂತೆ ಮಾಡುತ್ತಾರೆ. ಕಸ್ತೂರಿಯು ನೀರಿಗೆ ಮುಟ್ಟಿದ ಮಾತ್ರಕ್ಕೇ ಈ ಮೃಗವು ಮೋಕ್ಷಕ್ಕೆ ಹೋಯಿತಾದರೆ ಸ್ವತಃ ಸ್ನಾನಮಾಡಿದವರಿಗೆ ಏನು ಫಲವಾಗಬಹುದೆಂಬುದನ್ನು ಕವಿ ಬಾಯಿಂದ

ಹೇಳದೆ, ಊಹಿಸಲು ಸಹೃದಯರ ಬುದ್ಧಿಗೇ ಬಿಟ್ಟುಬಿಟ್ಟಿದ್ದಾನೆ.

ಗಂಗಾ ಸ್ನಾನದಿಂದ ಇಂಥ ಸ್ವರ್ಗಫಲ ಪ್ರಾಪ್ತವಾದರೂ ಕವಿಗೆ ಮಾತ್ರ ಆ ಫಲಪ್ರಾಪ್ತಿಯಲ್ಲಿ ಸ್ವಲ್ಪವೂ ಇಚ್ಛೆ ಇಲ್ಲ. "ಈ ಗಂಗಾತೀರದಲ್ಲಿದ್ದು ಅಮೃತದಂಥ ಈ ನೀರನ್ನು ಒಂದು ಬೊಗಸೆ ಕುಡಿದಾಗ ಆಗುವ ಆನಂದವು ಬ್ರಹ್ಮಾನಂದಕ್ಕೂ ಮಿಗಿಲಾದದ್ದು. ಅಂತೆಯೇ ರಾಜ ಮಹಾರಾಜರೆಲ್ಲ ಸರ್ವಸ್ವವನ್ನೂ ತೊರೆದು ತೀರ-ವಾಸಿಗಳಾಗುತ್ತಾರೆಂದು ಬಣ್ಣಿಸುತ್ತಾನೆ.

"ಮನೆಯ ಮರೆತು ಸಾಮ್ರಾಜ್ಯ ತೊರೆದು ತೃಣವೆಂದು ಹಣವ ಜರೆದು
ಜೇಕು ಜಾಲ ಜೋಕಾಲಿ ಜೀಕು ಜಲ ತೊಳೆದ ತೀರನೊರೆದು
ಅಮೃತಕಿಂತ ಸವಿ ಅಂಬು ಅಂಬೆ ತವ ಬೊಗಸೆ ತುಂಬ ಕುಡಿಯೆ
ಜನರಿಗಾಗುವಾನಂದದೆದುರು ನಿಜಮೋಕ್ಷ ಸುಖವು ಕಡೆಯೇ !"

ಗಂಗಾತೀರ ವಾಸದ ಮಹಿಮೆಯನ್ನು ಹೇಳುಹೇಳುತ್ತ ಒಂದು ಕಡೆ ಕವಿ ಒಮ್ಮೆಲೇ ಭಾವಚಂಡನ್ನು ಸೀಮಾತಿಗಾಮಿಯಾಗುವಂತೆ ಹೊಡೆಯುತ್ತಾನೆ. "ತಾಯೆ! ನಿನ್ನ ತೀರದ ಮಹಿಮೆ ಅತ್ಯದ್ಭುತ. ಏಕೆಂದರೆ ಅಲ್ಲಿರುವ ಮಾನವರ ಮಾತಂತೂ ದೂರವೇ ಇರಲಿ. ಕ್ಷುದ್ರವಾದ ಕಾಗೆ ಕೂಡ ಅಮರಾವತಿಯಲ್ಲಿ ಇರಲು ಒಲ್ಲೆನೆನ್ನುತ್ತದೆ." "ನ ಕಾಕಾ ನಾಕಾಧೀಶ್ವರ ನಗರ ಸಾಕಾಂಕ್ಷಮನಸಃ" – "ಯಾವ ತೀರತರು ತಿಳ್ಳಿಯಾಡಿ ತೆರೆ ತೊಟ್ಟಿಲಾಗಿ ತೂಗಿ । ಕಾಗೆ ಇಂದ್ರಪುರಿಸೌಖ್ಯಕಾಗಿ ಬೈರಾಗಿ ಸುಖವಿರಾಗಿ ತಾನಾಗಿ ತೀರ್ಥಯೋಗಿ" ಎಂದು ಧೈರ್ಯವಾಗಿ ಅಷ್ಟೇ ಸುಂದರವಾಗಿ ಹೇಳುತ್ತಾನೆ.

"ಜನರ ಈ ತೀರ ನಿವಾಸ ವ್ಯಸನಕ್ಕೆ ನಿನ್ನ ನೀರಿನ ಮಹಿಮೆಯೇ ಕಾರಣ. ಅದನ್ನು ನಾನೆಂತು ಬಣ್ಣಿಸಲಿ!"

"ಸೊದೆಯ ಸೊಂಪು ಕತ್ತುರಿಯ ಕಂಪು ಜಲ ಸಹಜ ತಂಪು ಇಂಪು
ರುಚಿರ ರುಚಿಯು ಸವಿ ಶುಚಿಯು ಗೆಲ್ಗೆ ತವ ತಾಯೆ! ತೋಯ ಪೆಂಪು ॥
ಅದುವೆ ಸೋಕಿ ಸಗರಜರು ಬೂದಿ ಮಂತ್ರಿಸಿದ ತೆರದಿ ದಿವ್ಯ
ದೇಹ ಪುಳುಕಿ ಆನಂದ ತುಳುಕಿ ಹಾಡುವರು ಗಂಗೆಕಾವ್ಯ॥"

"ಬಿದ್ದ ಬೂದಿಯ ಮೇಲೆ ನಿನ್ನ ನೀರು ಹರಿದರೆ ಆ ಬೂದಿಯೇ ಎದ್ದು ದೇವಪುರುಷನಾಗುವುದೆಂದ ಬಳಿಕ ಇಂಥ ನೀರು ತೀರಗಳನ್ನು ಬಿಡುವುದೆಂತು?" ಎಂದು ಕೇಳುತ್ತಾನೆ.

ಅಂತೆಯೇ ಪಾರ್ವತಿ ಎಷ್ಟೇ ಸಿಟ್ಟಾದರೂ, ವಿರೋಧ ಒಡ್ಡಿದರೂ, ಶ್ರೀಕಂಠ

"ಅವಳ ಗಂಡ ನಂಜುಂಡ ಕುಣಿವ ತಲೆ ಮೇಲೆ ನಿನ್ನನಿಟ್ಟು"– "ತಾಯೆ! ನಿನ್ನ ನೀರು ಯಾರನ್ನು ಉದ್ಧರಿಸುವುದಿಲ್ಲ! ಕಿವುಡ ಕುರುಡ ಮತಿ ಮದಡ ಕುಂಟ ಜಡ ಎಬಡ ಅಗಡ ವಿಗಡ ಮೂಕ, ಯಾರೇ ಇದ್ದರೂ, ಅವರೆಲ್ಲರ ರೋಗಕ್ಕೆ ನಿನ್ನ ನೀರು ರಾಮಬಾಣ" ಎಂದು ಗಂಗೆಯ ನೀರನ್ನು ಪರಿಪರಿಯಾಗಿ ಭಾವಪೂರ್ಣವಾಗಿ ಬಣ್ಣಿಸಿದ್ದಾನೆ.

ಜಗನ್ನಾಥನಿಗೆ ಪ್ರಶಂಸನೀಯವಾದದ್ದು ಕೇವಲ ಕಂಗೆಯ ನೀರು ಮಾತ್ರವಲ್ಲ. ಅವನಿಗೆ ಗಂಗೆಯ ತೀರ ನೀರುಗಳಂತೆ ತೀರದ ಗಿಡಗಂಟೆ ಮಣ್ಣು ಕಲ್ಲು ಕುಸುಮಗಳು ಕೂಡ ವಂದನೀಯವಾಗಿವೆ. ಗಂಗಾತಟಾಕದ ಬರಿಯ ನೀರಿನ ರಾಡಿಯನ್ನೇ ಕವಿ ಎಷ್ಟು ಮನೋಹರವಾಗಿ ಬಣ್ಣಿಸಿ, ಆ ರಾಡಿನೀರಿನಲ್ಲೇ ಎಂಥ ರಸಬುಗ್ಗೆಯನ್ನು ಚಿಮ್ಮಿಸಿದ್ದಾನೆ!

"ಗಾಳಿ ಲೀಲೆ ಲೋಲನೆಯ ಲಹರಿಯುಯ್ಯಾಲೆಲಾಲಿಲುಲಿತ
ಕಮಲ ಗಲಿತ ಕಿಂಜಲ್ಕಮಿಲಿತ ಕುಂಕುಮದ ಕಾಂತಿ ಕಲಿತ॥
ಇಂದ್ರನೂರಸುಂದರಿಯ ವೃಂದ ಎದೆಗಂಧ ಚಂದನಗರು
ಕೂಡಿ ರಮ್ಯ ರಸರಾಡಿ ಕಳೆಯಲೆಮ್ಮೆಲ್ಲ ಬಾಳಿನೊಗರು॥"

ಮೊದಲೇ ಗಂಗೆಯ ನೀರು! ಇದರೊಳಗಿನ ಕಸಕಡ್ಡಿಯೆಂದರೆ ಹಿಮವತ್ ಪರ್ವತದಲ್ಲಿ ನುಗ್ಗಿ ಬರುವಾಗ ಹರಿದುಬಂದ ಕೃಷ್ಣಾಗರು, ಕುಂಕುಮಾಗರು, ಶ್ರೀಗಂಧ, ಚಂದನಾಗರು, ಕೃಷ್ಣಾಗರು ಮೊದಲಾದ ಸುಗಂಧಿ ಗಿಡಗಳ ಚಕ್ಕೆ-ಚೂರುಗಳು. ಇಲ್ಲಿಯ ಹುಡಿ ಪುಡಿಗಳೆಂದರೆ ದೇವಕನ್ನಿಕೆಯರ ಎದೆಗಂಧ ಕಸ್ತೂರಿ ಪುನುಗುಗಳ ಪರಿಮಳ ಪರಾಗಗಳೇ. ಇಲ್ಲಿಯ ಧೂಳಿಯೆಂದರೆ ಗಾಳಿಗೆ ಹೊಯ್ದಾಡುವ ಕಮಲಕೋಶದಿಂದ ಉದುರಿದ ಕಿಂಜಲ್ಕಪುಂಜ. ಇವೆಲ್ಲವೂ ಸೇರಿ ರಾಡಿಯಾದ ನೀರಿನ ಸೊಬಗು ಸೌಗಂಧಗಳನ್ನು ಯಾರು ಬಯಸಲಿಕ್ಕಿಲ್ಲ!

ಇದರಂತೆ ಗಂಗೆ ತಡಿಯ ಮಣ್ಣನ್ನಾದರೂ 'ಬೊಮ್ಮ ಬರೆದ ಹಣೆ ಹಲಗೆ ದುಕ್ಕದಕ್ಕರಗಳಳಿಸಿ ಬಿಡುವ' ಎಂದು ಬಣ್ಣಿಸುತ್ತಾನೆ. 'ಸಖಾಯೋ ನಃ ಸಂತು ತ್ರಿದಶ ತಟಿನೀ ತೀರತರವಃ' ನಿನ್ನತಡಿಗಡಿಯ ಗಿಡಮರಗಳೆಲ್ಲ ನನ್ನ ಗೆಳೆಯರಾಗಲೆಂದು ಬೇಡಿಕೊಳ್ಳುತ್ತಾನೆ. ಗಂಗೆಯ ತೆರೆ ತುಂತುರಗಳನ್ನು ಕೂಡ

"ತಾರೆಕೇರಿ ತಡಸಲಿನ ತೀರ ತಿರುನೀರ ತೀರ ಸ್ವಾರ
ಗಾಳಿ ತೂರಿ ತೆರೆ ತುಂತುರೇರಿ ತಂಪೊಗೆವ ತವತುಷಾರ"

ಎಂದು ಎದೆ ತುಂಬಿ ಹೊಗಳಿ ಗಂಗಾ ನೀರಿನ ಕಣಕಣಗಳೂ ಕೂಡ

ಸಂಸಾರದ ಉರಿಯನ್ನು ಶಾಂತ ಮಾಡಲು ಸಮರ್ಥ ಇವೆಯೆಂದು ಹೇಳಿದ್ದಾನೆ. ಇಂಥ ಪರಮ ಪವಿತ್ರವಾದ ಪುಣ್ಯ ನದಿಯನ್ನು ಬಿಟ್ಟು ಇಷ್ಟು ದಿನ ದಿಲ್ಲೀಶ್ವರ ಕಾಮೇಶ್ವರ ಮೊದಲಾದ ರಾಜರೆದುರು ಓಡಿ ಕುಣಿದು ಹಾಡಿದ್ದು ಜಗನ್ನಾಥನಿಗೆ ಪಶ್ಚಾತ್ತಾಪವಾಗಿದೆ. ಅಂತೆಯೇ

"ಸಿರಿಯ ಸೆರೆಯ ಮದದುಂಥ ಅಂಥ ನೃಪರೆದುರು ಓಡಿಓಡಿ
ದಣಿದು ಮಣಿದು ನಿತ್ರಾಣ ಪ್ರಾಣ ನಾ ಬಿದ್ದೆ ಬುದ್ಧಿಗೇಡಿ
ನಿನ್ನ ಚಣವ ಬಿಟ್ಟಲೆದು ಬನ್ನ ಬಟ್ಟದ್ದು ಎನ್ನ ತಪ್ಪು
ಕಂದನೆಂದು ದಯೆಸಿಂಧು ಇಂದು ನೀನಪ್ಪಿಕೊಳ್ಳೆ ಒಪ್ಪು
ಎಂದು ಹೇಳಿ ಪಶ್ಚಾತ್ತಾಪಪಟ್ಟು ಉದ್ಧರಿಸೆಂದು ಅಂಗಲಾಚಿದ್ದಾನೆ."

ಒಂದೊಂದು ಸಲ ಮಹಾಪಾಪಿಷ್ಠನಾದ ತನ್ನನ್ನು ಉದ್ಧರಿಸಲು ಗಂಗೆಯನ್ನು ಹುರುದುಂಬಿಸಿದಂತೆ ಮಾತನಾಡುತ್ತಾನೆ. ತಾಯೇ ನನ್ನನ್ನು ನೋಡಿ ತೀರ್ಥ ನಡುಗಿವೆ. ಶಿವ ಮೊದಲಾದವರು ಕಿವಿಯಲ್ಲಿ ಬೆರಳಿನಿಟ್ಟು ದೂರ ಸರಿಸಿದ್ದಾರೆ. ಎಲ್ಲರೂ ಅಸಾಧ್ಯವೆಂದು ಬಿಟ್ಟ ಈ ನನ್ನನ್ನು ನೀನು ಉದ್ಧರಿಸಿದರೆ ನಾವೇ ಪತಿತಪಾವನರು ಎನ್ನುವ ಅವರದೆಲ್ಲ ಗರ್ವಭಂಗವಾಗುತ್ತದೆ ಎಂದು ಗಂಗೆಯಲ್ಲಿಯೂ ಜೀವಸಹಜವಾದ ಭಾವದೌರ್ಬಲ್ಯವನ್ನು ಊಹಿಸಿ ಆ ಅಹಂಕಾರನಾಡಿಯ ಮೇಲೆಯೇ ಬೆರಳಿಟ್ಟು ಉದ್ಧಾರದ ಸ್ಪರ್ಧೆಗೆ ಅವಳನ್ನು ಹುರಿಗೊಳಿಸುತ್ತಾನೆ.

ಒಂದು ಕಡೆಯಂತೂ ನಿನ್ನ ಬಹುಕಾಲದ ಇಚ್ಛಾ ಪೂರ್ತಿಗಾಗಿಯೇ ನಾನು ಬಂದಿದ್ದೇನೆ. ಯಾರನ್ನು ಉದ್ಧರಿಸಿದರೆ ಜಗತ್ತೇ ಬೆಚ್ಚಿ ಬೆರಳು ಕಚ್ಚುವದೋ ಅಂಥ ಪಾಪಿಷ್ಠ ಯಾರು ಎಂದು ನೀನು ಹುಡುಕುತ್ತಲಿದ್ದೆ. ಅಂಥ ಪಾಪಿ ನಾನೀಗ ಬಂದಿದ್ದೇನೆ. ನನ್ನನ್ನು ಉದ್ಧರಿಸಿ ನಿನ್ನ ಮನೋರಥವನ್ನು ಈಡೇರಿಸಿಕೊಳ್ಳೆಂದು ಹೇಳುತ್ತಾನೆ.

ಇವನು ವರ್ಣಿಸಿದ ಗಂಗೆಯ ಮಹಿಮೆಯಂತೂ ಬಹಳ ಅಪೂರ್ವವಾಗಿದೆ. ಇಲ್ಲಿಯ ಕವಿಯ ಕಲ್ಪನಾ ವಿಲಾಸಕ್ಕೆ ಬುದ್ಧಿ ಬೆರಗಾಗಿ, ಭಾವವು ಭಕ್ತಿಯಿಂದ ಅವನ ಕಾವ್ಯಶ್ರೀಯ ಎದುರು ಪ್ರಣಯ-ಪ್ರವ್ಹವಾಗಿ ನಿಲ್ಲುತ್ತದೆ.

ತಾಯೇ ನಿನ್ನ ಮಹಿಮೆಯ ಮಾತು ಜಗತ್ತಿನಲ್ಲಿರುವವರೆಗೆ ಯಮನೂರು ಜಾತ್ರೆಯಲ್ಲಿ ಗದ್ದಲವೇ ಇಲ್ಲ. ಸಾವಿನೂರ ಸಂತೆಯಲ್ಲಿ ಸೊಲ್ಲುಗುಲ್ಲಿಲ್ಲ. ಅಲ್ಲಿ ಎಲ್ಲವೂ ಶಾಂತ. ದಿಗ್‌ದಿಗಂತಗಳಲ್ಲಿ ಹುಡುಕಿದರೂ ಯಮದೂತರಿಗೆ ಹೆಣ ದೊರಕದಂತಾಗಿದೆ ಎಂದು ನಗೆ ಬರುವಂತೆ ಹೇಳಿದ್ದಾನೆ.

ಪುಣ್ಯ ಮಾಡಿದವರಷ್ಟೇ ಸ್ವರ್ಗಕ್ಕೆ ಹೋಗಬೇಕು. ಪಾಪಿಷ್ಠರು ನರಕದಲ್ಲಿ ಕೊಳೆಯಬೇಕು. ಈ ಪಂಕ್ತಿಭೇದವು ಗಂಗೆಯ ಮಹಿಮೆ ಇಲ್ಲದ ದುರ್ದೇಶದಲ್ಲಿ ಮಾತ್ರ. ಗಂಗೆ ಇದ್ದಲ್ಲಿ ಪುಣ್ಯವಂತರೂ ಪಾಪಿಷ್ಠರೂ ಕೂಡಿಯೇ ಸ್ವರ್ಗಾರೋಹಣ ಮಾಡುವರು ಎಂಬ ಮಾತಿನಿಂದ ಗಂಗೆಯೆಂದರೆ "ಸ್ವರ್ಗದಲ್ಲಿಯೂ ಸಾಮ್ಯವಾದವನ್ನು ಸಾಧಿಸುವ ದೇವನದಿ" ಎಂದು ಚಮತ್ಕಾರವಾಗಿ ಹೊಗಳಿದ್ದಾನೆ. "ಕಂಡು ಬರುವದಿದು ಅಶುಭ ದೇಶದಲಿ ಇಂಥ ಪಂಕ್ತಿಭೇದ! ಎಲ್ಲಿ ಕೇಳದಿದೆ ಮೃದುಮೃದಂಗ ಗಂಗಾತರಂಗನಾದ."

ಕಂಡದ್ವಿಜರ ತುಂಡರಿಪ ಪುಂಡ, ಪಾಖಂಡಿ ಹೊನ್ನುಚೋರ
ಹೆಂಡ ಕುಡಿವ, ಗುರುಹೆಂಡಿರೊಡನೆ ಭಂಡಾಟಮಾಳ್ಪಜಾರ

ಇಂಥ ಪಂಚಮಹಾಪಾತಕ ಮಾಡಿದ ಮಹಾಪಾಪಿಗಳೂ ಕೂಡ ಗಂಗೆಯಲ್ಲಿ ದೇಹ ನೀಗಿದರೆ ಯೋಗಿಗಳಂತೆ ಸುಖಿಯಾಗಿರುವರು ಎಂದು ಸಾರಿದ್ದಾನೆ.

"ಜನರೆಲ್ಲ ಜಪತಪಗಳಿಂದ ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸುತ್ತಿರುವರು. ನಾನು ಮಾತ್ರ ನನ್ನ ಭಾರವನ್ನು ನಿನ್ನ ತಲೆಯ ಮೇಲೆ ಹಾಕಿ ನಿಶ್ಚಿತನಾಗಿ ಕುಳಿತಿದ್ದೇನೆ. ಇಂಥ ನನ್ನನ್ನು ನೀನು ಉದ್ಧರಿಸದಿದ್ದರೆ ಜಗತ್ತಿನಲ್ಲಿ ನಂಬಿಕೆ ಕರುಣೆ ಎಂಬ ವಸ್ತುಗಳೇ ಇಲ್ಲದಂತಾಗುವದು ಎಂದು ಕರುಣಾಜನಕವಾಗಿ ಹೇಳಿಕೊಳ್ಳುತ್ತಾನೆ.

ಎಲ್ಲ ಬಗೆಯ ಬಹಿಷ್ಕಾರ ತಿರಸ್ಕಾರ ದಾರಿದ್ರ್ಯ ಧಿಕ್ಕಾರಗಳಿಂದ ಜೀವನವೇ ಬೇಸರವಾದ ಜಗನ್ನಾಥ ಅಗತಿಕಾಗತಿನಾಗಿ ಕೊನೆಗೆ ಗಂಗಾತಾಯಿಗೆ ಮೊರೆಹೊಕ್ಕ. ತನ್ನ ಒಡಲನ್ನೆಲ್ಲ ಸುಡುತ್ತಿರುವ ದುಃಖದ ಕಾಡ್ಗಿಚ್ಚನ್ನೆಲ್ಲ ತೋಡಿಕೊಂಡ. ತಾಯ್ಗರುಳು ಕರಗುವಂತೆ ಅವ್ವ! ನಿನ್ನ ಮಗುವನ್ನು ಉದ್ಧರಿಸೆಂದು ಅಲ್ಪರೆದ. ಅಮ್ಮ! ಈ ಜಾಗತಿಕ ಧಿಕ್ಕಾರದ ದಳ್ಳುರಿಯಲ್ಲಿ ನಿಂದು ಬೆಂದು ಬಂದಿದ್ದೇನೆ. ತಾಯೇ ನಿನ್ನ ತೊಡೆಯ ಮೇಲೆ ಈ ಖೋಡಿ ಕೂಸನ್ನು ಅಕ್ಕರೆಯಿಂದ ಮಲಗಿಸಿ ಲಾಲಿಸಿ ಪಾಲಿಸು ಎಂದು ಮುಂತಾಗಿ ಮೊರೆಹೊಕ್ಕು ಅಂಗಲಾಚುತ್ತಾನೆ.

ತಾಯೆ ನಿನ್ನ ಹಾಲ್ಕುಡಿದು ನಡೆದು ಒಡನಾಡಿ ಕೂಡಿ ಆಡಿ
ಕುಣಿದು ಮಣಿದು ಮೈದಣಿದು ಬಂದೆ ನಾ ನಿನ್ನ ಕಂಡ ಖೋಡಿ
ನೀನು ತೆರೆಯ ತೊಡೆ ಮೇಲೆ ಮಲಗಿಸಕ್ಕರದಿ ಚುಕ್ಕುತಟ್ಟಿ
ಹೇಳಿ ಗಾಳಿ ಜೋಗುಳವ ಲಾಲಿ ಮಲಗೆನ್ನ ಚೆನ್ನಗಟ್ಟಿ

ಇಂಥ ದೀನ ಪ್ರಾರ್ಥನೆಯನ್ನು ಕೇಳಿದಾಗ ಯಾವ ತಾಯಿಯ ಕರುಳು ಕರಗಲಿಕ್ಕಿಲ್ಲ!

ಅವನ ಈ ಕರುಣಾಕ್ರಂದನಕ್ಕೆ ಆ ಜಲದಾಯಿಯ **ಹೃದಯ ನೀರಾಗುತ್ತದೆ. ನೀರು ಹೃದಯವಾಗುತ್ತದೆ.** ಆ ಶೋಕ-ಶ್ಲೋಕಗಳನ್ನು ಕೇಳಿದಂತೆಲ್ಲ ಆ ತಾಯಿಯ ಕರುಳು ಕರಗಿ ಕರುಣೆ ಉಕ್ಕೇರಿ ಬರುತ್ತದೆ. ಒಂದೊಂದು ಪದ್ಯಕ್ಕೆ ಒಂದೊಂದು ಪಾವಟಿಗೆಯನ್ನು ಏರುತ್ತ ಆ ಮಹಾತಾಯಿಯು ಜಗನ್ನಾಥನು ಗಂಗಾಲಹರಿಯ ಕೊನೆಯ ಪದ್ಯವನ್ನು ಹಾಡಿದಾಗ 52ನೇ ಸೋಪಾನವನ್ನು ಏರಿ ಈ ತೆರೆ ತೋಳುಗಳಲ್ಲಿ ತನ್ನ ದುಃಖಾರ್ತ ಮಗುವನ್ನು ಎತ್ತಿಕೊಂಡು ಹೋಗಿಬಿಡುತ್ತಾಳೆ. ಲವಂಗೀ ಸಹಿತ ಜಗನ್ನಾಥನು ಗಂಗೆಯಲ್ಲಿ ಜಲಸಮಾಧಿಯನ್ನು ಹೊಂದಿ ಆರ್ಯಾವರ್ತದಲ್ಲಿ ನಡೆದ ಪತಿತೋದ್ಧಾರ ಚರ್ಚೆ, ವಾದ ವಿವಾದಗಳ ಕಪಟ ನಾಟಕ ದುರಂತ ದೃಶ್ಯಗಳಿಗೆಲ್ಲ ಕೊನೆಯ ಪರದೆಯನ್ನು ಎಳೆದುಬಿಡುತ್ತಾನೆ.

ಈ ಸಂಗತಿಯನ್ನು ಪುಷ್ಟೀಕರಿಸಲು ಯಾವ ಪ್ರಮಾಣಗಳಿಲ್ಲದ್ದರಿಂದ ಈ ಕಥೆಯ ವಿಶ್ವಸನೀಯತೆಯು ಸಂದಿಗ್ಧವಾಗಿದ್ದರೂ ಇಲ್ಲಿಯ ದುರಂತ ವಸ್ತು ವಿನ್ಯಾಸದಿಂದಾಗಿ ಈ ದಂತ ಕಥೆಗೆ ಒಂದು ನಾಟಕೀಯತೆ, ಮತ್ತು ಆಂಗ್ಲ ಶೋಕಾಂತಿಕೆಯಂತೆ ಭೀಷಣಬಂಧುರತೆ ಪ್ರಾಪ್ತವಾಗಿದೆ. ರೋಮಾಂಚನಕಾರಿಯಾದ ಈ ಕರುಣ ಕತೆಯ ಹೃದಯದ್ರಾವಕ ಹಿನ್ನೆಲೆಯಲ್ಲಿ ಹುಟ್ಟಿ ಹರಿದ ಗಂಗಾಲಹರಿಗೆ ಒಂದು ಅತ್ಯುತ್ತಮವಾದ ಭಾವಗೀತದ ಸ್ವರೂಪ ಬಂದಿದೆ. ಕವಿಯ ಹೃದಯಾಂತರಾಳದಿಂದ ಚಿಮ್ಮಿ ಬರುವ ಪ್ರತಿಯೊಂದು ಪದ್ಯವೂ ಒಂದೊಂದು ಚಮತ್ಕಾರವಾದ ಭಾವಕೌಸ್ತುಭದ ರುಚಿಯನಾಂತೇ ಹೊರಬರುತ್ತದೆ. ಭಕ್ತಿಯ ಸ್ಥಾಯಿಯಿಂದಲೇ ನವರಸಗಳನ್ನೂ ಪರಿಣತಿಗೊಳಿಸಿ, ಕರುಣೆಯ ಹಾಸಿನಲ್ಲಿ ವಾತ್ಸಲ್ಯದ ಒಪ್ಪವಿಡುವ ಜಗನ್ನಾಥನ ಜಾಣ್ಮೆ "ತ್ವಮಿವ ಕುಶಲಸ್ತ್ವಂ ವಿಜಯಸೇ!" ಎನ್ನುವಂತೆ ಮಾಡುತ್ತದೆ.

ಜಗನ್ನಾಥನ ಎಲ್ಲ ಕೃತಿಗಳಲ್ಲಿ ಭಾವ, ಭಾಷೆ, ರಸ, ಧ್ವನಿ, ಚಮತ್ಕೃತಿ, ಶಬ್ದ, ತಾಳ, ತೂಕ, ಲಯ, ಲಾಲಿತ್ಯ ಮುಂತಾದ ಎಲ್ಲ ದೃಷ್ಟಿಯಿಂದಲೂ ಗಂಗಾಲಹರಿ ಅರಸು ಕೃತಿ ಎಂದು ಹೇಳಬಹುದು. ಈ ಗಂಗಾಲಹರಿಯ ಮೂಲ ಮಧುಕೋಶವನ್ನು ನಾನು ಕಂಡುಂಡು ಮನದಲ್ಲಿ ತೃಪ್ತಿ ತುಳುಕಿದಾಗ ಅದನ್ನು ಕನ್ನಡಿಸಿದ್ದೇನೆ. ಈ ಕನ್ನಡ ಗಂಗಾಲಹರಿಯನ್ನು ರಸಜ್ಞರಾದ ಸಹೃದಯರು ಸ್ವಾಗತಿಸುವಿರೆಂದು ನಂಬಿದ್ದೇನೆ.

ಜಗನ್ನಾಥನಂಥ ಉದ್ದಾಮ ಕವಿಯ ಓಜಸ್ವಿನಿಯಾದ ವಾಗ್ಗಂಗಾ ಪ್ರವಾಹವನ್ನು ನನ್ನಂಥ ಪಾಮರನ ನಿರ್ಬಲವಾಚಾಪಾತ್ರದಲ್ಲಿ

ಹರಿಯಿಸಹೊರಟಿದ್ದು ನನ್ನ ಅಳತೆಗೆ ಮೀರಿದ ಸಾಹಸವೇ ಸರಿ. ಇದು ಮೂಲ ಗಂಗಾ ಲಹರಿಯ ಪೂರ್ಣ ರಸಾನುವಾದವೂ ಅಲ್ಲ, ಭಾವಾನುವಾದವೂ ಅಲ್ಲ, ಭಾಷಾಂತರವಂತೂ ಆಗುವುದು ಸಾಧ್ಯವೇ ಇಲ್ಲ. ಆದರೆ ಆ ಮೂಲ ಕೃತಿಯನ್ನು ಓದಿದಾಗ ನನಗಾದ ಆನಂದವನ್ನು ನನ್ನ ಹರಕು-ಮುರುಕಾದ ಕನ್ನಡದಲ್ಲಿ ವ್ಯಕ್ತಗೊಳಿಸಲು ಪ್ರಯತ್ನಿಸಿದ್ದೇನೆ. ಇದು ಆ ಮೂಲ ಗಂಗಾಲಹರಿಯ ರಸ ಭಾವ ಧ್ವನಿಗಳ ಛಾಯಾನುವಾದ ಮಾತ್ರ. ಇದು ಕನ್ನಡದಲ್ಲಿ ನನ್ನ ಪ್ರಥಮ ಕೃತಿಯಾದುದರಿಂದ ಎಷ್ಟೋ ಲೋಪದೋಷಗಳಾಗುವದು ಸಹಜ. ಆದರೂ "ಗಂಗಾಸಂಗೇನ ನೈರ್ಮಲ್ಯಂ ಯಥಾರಥ್ಯಾಂಬುನೋಪಿಚ" ಎಂಬಂತೆ ಆ ಮಂದಾಕಿನೀ ಸಂಬಂಧದಿಂದ ಶುಭಾವಹವಾದ ಈ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ಭಾವಿಸಿದ್ದೇನೆ.

ಪಂ. ಪಂಢರೀನಾಥಾಚಾರ್ಯ ಗಲಗಲಿ

## जगदगुरु श्री कूडली शृंगेरि पीठाधीश श्री सच्चिदानंद शंकरभारति स्वामीनां शुभाशयः

पंडितावतंसानां श्री पंढरीनाथाचार्याणां शैली सौपर्वाण्यां वाण्यामिव कर्णाटकभाषायामपि मधुमधुरा सुधासुन्दरा भावगभीरा चेति अक्षिसात्कृत्य हर्षपर्कर्षेण नरीनृत्यति नश्चेतः । जगन्नाथविरचित संस्कृत गंगालहर्यैव मधुरादपि मधुरतरेति तामेव पाठं पाठं प्रमोदपरवशानामस्माकं पं. पंढरिनाथाचार्यैः परिवार्तितां इमां कन्नडगंगालहरीं विलोक्य तदपेक्षया समधिक एव संतोषः समजनि । देवभाषायाः सौंदर्यस्वारस्यसमास्वादैक तृप्तचित्तानामस्माकं अद्यावधि कर्नाटक भाषायां विशेषासक्तिर्नैवासीदेव । परमिदानीं पं पांढरीनायाचार्याणां कन्नडगंगालहरी काव्यस्य रसमधुरिमाणं भावमृदिमानं भाषासुषमां च समालोक्य समास्वाद्य च कन्नडभाषायामपि अतीव आदरः आसक्तिश्च समुदपद्यत । तुंगाभद्रा संगम पुण्यस्थले कूडली क्षेत्रे निवसतामस्माकमस्मिन् ग्रन्थे संस्कृतकन्नडउभाषात्मकगंगालहर्योः बिम्बप्रतिबिम्बभावेन प्रातिवेशिकमुद्रणं उभयभाषामेलनं च तुंगभद्रा संगमवत् रसरंगायमानं अतीव हृदयंगममवभासते । एवमेव तरुणकवीनामेतेषां अधिकाधिकं उभय भाषासेवां कर्तुं अत्यावश्यकीं धीशाक्तिं आयुरारोग्यं च प्रयच्छत्विति भगवन्तं प्रार्थयामः ।

इति नारायणस्मृतयः

# ಶ್ರೀ ತ್ರಿಕೂಟೇಶ್ವರ ದೇವಾಲಯ ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು ಗದಗ ಕೂಡಲೀ ಶೃಂಗೇರಿ ಮಠ

ಪಂಡಿತವರೇಣ್ಯರಾದ ಶ್ರೀ ಪಂಢರಿನಾಥಾಚಾರ್ಯರ ಕನ್ನಡ ಶೈಲಿಯು ಸಂಸ್ಕೃತದಂತೆಯೇ ಮಧು-ಮಧುರವೂ, ಅಮೃತ-ರುಚಿರವೂ ಇದ್ದು ಅದರ ಭಾವ ಗಾಂಭೀರ್ಯವನ್ನು ಕಂಡು ನಮ್ಮ ಮನಸ್ಸು ಆನಂದದಿಂದ ನಲಿದು ನರ್ತಿಸುತ್ತದೆ. ಜಗನ್ನಾಥ ಪಂಡಿತನ ಸಂಸ್ಕೃತ ಗಂಗಾಲಹರಿಯೆ ಅತ್ಯಂತ ರಸರಮ್ಯವಾದ ಮಧುರ ಕಾವ್ಯವೆಂದು ತಿಳಿದು ಅದನ್ನೇ ಓದಿ ಓದಿ ಆನಂದ ಪಡುತ್ತಿರುವ ನಮಗೆ ಪಂ. ಪಂಢರಿನಾಥಾಚಾರ್ಯರ ಈ ಗಂಗಾಲಹರಿಯನ್ನು ಓದಿ ನೋಡಿದಾಗ ತದಪೇಕ್ಷಯಾಪಿ ಅಧಿಕ ಆನಂದವಾಯಿತು. ರಸಸೌಂದರ್ಯ ದೇವಭಾಷಾ ಮಾತ್ರ ನಿಷ್ಠವಾದ ಧರ್ಮವೆಂದು ತಿಳಿದು, ಅದರ ಸ್ವಾರಸ್ಯವನ್ನು ಕಂಡು ಉಂಡು ತೃಪ್ತಿಗೊಂಡ ನಮಗೆ ನಿಜವಾಗಿಯೂ ಕನ್ನಡದಲ್ಲಿ ಇಂದಿನವರೆಗೆ ಆಸಕ್ತಿಯೇ ಇರಲಿಲ್ಲ. ಆದರೆ ಪಂ. ಪಂಢರಿನಾಥಾಚಾರ್ಯರ ಈ ಕನ್ನಡ ಗಂಗಾಲಹರಿಯ ಭಾಷಾ ಸೌಷ್ಠವವನ್ನೂ ರಸಪೇಶಲತೆಯನ್ನೂ ಕಂಡು ಈಗ ಕನ್ನಡ ಭಾಷೆಯಲ್ಲಿ ನಮಗೆ ಅತ್ಯಂತ ಆಸ್ಥೆ ಆಸಕ್ತಿಗಳು ಉಂಟಾಗಿವೆ.

ಹಾಗೂ ಇಲ್ಲಿ ಸಂಸ್ಕೃತ ಗಂಗಾಲಹರಿ ಮತ್ತು ಕನ್ನಡ ಗಂಗಾಲಹರಿ, ಮೂಲ ಅದರ ಅನುವಾದ ಎರಡನ್ನೂ ಅಕ್ಕಪಕ್ಕದಲ್ಲಿ ಕೊಟ್ಟಿದ್ದರಿಂದ ತುಂಗಾ ಮತ್ತು ಭದ್ರಾ ಎರಡೂ ನದಿಗಳ ಸಂಗಮದಂತೆ ಈ ರಸರಂಗವು ಕೂಡಲಿ ಕ್ಷೇತ್ರವಾಸಿಗಳಾದ ನಮಗೆ ಒಳ್ಳೇ ಹೃದಯಂಗಮವಾಗಿ ಕಾಣುತ್ತದೆ. ತರುಣ ಕವಿಗಳಾದ ಇವರಿಗೆ ಇದರಂತೆ ಕನ್ನಡ ಸಂಸ್ಕೃತ ಎರಡೂ ಭಾಷೆಗಳ ಸೇವೆಯನ್ನು ಹೆಚ್ಚು ಹೆಚ್ಚಾಗಿ ಮಾಡಲು ಶಕ್ತಿ ಉತ್ಸಾಹ ಬುದ್ಧಿ ಆಯುರಾರೋಗ್ಯಗಳನ್ನು ದಯಪಾಲಿಸಲೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.

**ಇತಿ ನಾರಾಯಣ ಸ್ಮರಣೆಗಳು**

# ಅಭಿವಂದನೆ

ಪಾಂಡಿತ್ಯ ಹಾಗೂ ರಸಿಕತೆಗಳು ಒಟ್ಟಿಗೆಯೆ ಇರುವುದು ಅಪರೂಪ. ಆದರೆ, ಪೀಯೂಷ ಲಹರಿಯನ್ನೂ ರಚಿಸಿದ ಪಂಡಿತರಾಜ ಜಗನ್ನಾಥ ಹಾಗೂ ಈ ಕಾವ್ಯವನ್ನು ಕನ್ನಡಕ್ಕೆ ಕೊಟ್ಟ ಶ್ರೀ ಪಂಢರಿನಾಥಾಚಾರ್ಯ ಗಲಗಲಿ ಇಬ್ಬರೂ ಈ ಮಾತಿಗೆ ಅಪವಾದವಾಗಿದ್ದಾರೆ. ಪೀಯೂಷ ಲಹರಿ ಹಾಗೂ ಭಾಮಿನೀ ವಿಲಾಸಗಳಂಥ ಶ್ರೇಷ್ಠ ಕಾವ್ಯಗಳನ್ನು ಸೃಷ್ಟಿಸಿದ ಜಗನ್ನಾಥ ರಸಗಂಗಾಧರದಂಥ ಅಪೂರ್ವ ಅಲಂಕಾರ ಗ್ರಂಥವನ್ನು ಬರೆದ ತಮ್ಮ ಕಾವ್ಯಕ್ಕಾಗಿ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ಗಳಿಸಿದ ಆಚಾರ್ಯರು ತಮ್ಮ ವಿದ್ವತ್ತಿಗಾಗಿ ರಾಷ್ಟ್ರಪತಿಗಳಿಂದ ಸನ್ಮಾನಿತರಾಗಿದ್ದಾರೆ.

ಗಂಗಾಲಹರಿ ನನಗೆ ಕೇವಲ ಕಾವ್ಯಖಂಡ ಮಾತ್ರವಾಗದೆ ಲೌಕಿಕ ಜೀವನದಲ್ಲಿ ರಸಮಂತ್ರವಾಗಿದೆ. "ಸರ್ವಾಂಗ ಸಂತರ್ಪಣೆಗೈಯುವ ಶಬ್ದ ಜ್ಯೋತ್ಸ್ನೆಯಾಗಿದೆ" ಎಂದು ಆಚಾರ್ಯರು ಹೇಳಿದ್ದಾರೆ. ಹೀಗಿರುವಾಗ ಕನ್ನಡಿಗರು ತಮ್ಮ ಭಾಷೆಯಲ್ಲಿಯೇ ಅದನ್ನೋದಿ ಧನ್ಯರಾಗಬೇಕೆಂದು ಅವರು ಬಯಸಿದ್ದರಲ್ಲಿ ಆಶ್ಚರ್ಯವಿಲ್ಲ. ಅವರು ತಮ್ಮ ಅನುವಾದವನ್ನು ಮೂಲ ಗಂಗಾಲಹರಿಯ ರಸಭಾವ ಧ್ವನಿಗಳ ಛಾಯಾನುವಾದ ಮಾತ್ರ ಎಂದು ಕರೆದಿದ್ದಾರೆ. ಇದು ವಿನಯದ ಮಾತು. ಅವರ ಅನುವಾದ ತನ್ನ ಲಾಲಿತ್ಯದಲ್ಲಿ ಸಹಜತೆಯಲ್ಲಿ ರಸಸೃಷ್ಟಿಯಲ್ಲಿ ಬೇಂದ್ರೇಯವರ 'ಮೇಘದೂತ'ವನ್ನು ನೆನಪಿಸುತ್ತದೆ. ಬೇಂದ್ರೆಯವರೇ ಈ ರಚನೆಯನ್ನು ಮೆಚ್ಚಿ ಅದನ್ನು ಶಕ್ತಿಯ ಆವಿರ್ಭಾವ ಎಂದು ಕರೆದಿದ್ದಾರೆ. ಈ ಕಾವ್ಯವನ್ನು ಆಚಾರ್ಯರ ಮಧುರವಾಣಿಯಲ್ಲಿಯೇ ಕೇಳುವ ಭಾಗ್ಯ ನನ್ನದಾಗಿದೆ.

ಆಚಾರ್ಯರು ಗಂಗಾಲಹರಿಗೆ ಸುದೀರ್ಘವಾದ ಕವಿ ಪರಿಚಯವನ್ನು ಬರೆದು ಉಪಕಾರ ಮಾಡಿದ್ದಾರೆ. ದಕ್ಷಿಣದಲ್ಲಿ ಹುಟ್ಟಿ ಉತ್ತರದಲ್ಲಿ ಕೀರ್ತಿ ಗಳಿಸಿದ ಈ ಕವಿಯ ಜೀವನ ಎಷ್ಟು ವರ್ಣಮಯವಾಗಿದ್ದಿತೋ ಅಷ್ಟೇ ಏರಿಳಿತಗಳನ್ನೂ ಅನುಭವಿಸಿತು. ದಿಲ್ಲೀಶ್ವರನ ಅನುಗ್ರಹಕ್ಕೆ ಪಾತ್ರವಾಗಿದ್ದ ಕವಿ ಅನಾಥವಾಗಿ ಗಂಗೆಯ ದರ್ಶನಕ್ಕಾಗಿ ಹಾತೊರೆದು ಹೋದ. ತಾಯಿಯಲ್ಲಿ

ತನ್ನ ಪಾಪಗಳೆಲ್ಲವನ್ನೂ ಕ್ಷಮಿಸಿ ಕಾಪಾಡಲೂ ಬೇಡಿಕೊಂಡ. ಗಂಗಾಲಹರಿಯಲ್ಲಿ ಅವನ ಆರ್ತತೆ ಹೃದಯಂಗಮವಾಗಿ ಮೂಡಿದೆ. ಆಚಾರ್ಯರ ಅನುವಾದ ಮೂಲದ ಅರ್ಥವನ್ನು ಬೆಳಗಿಸಿದೆ.

ಸಿರಿಯ ಸೆರೆ ಮದ ಅಂಧ ನೃಪರೆದುರು ಓಡಿ ಓಡಿ
ದಣಿದು ಮಣಿದು ನಿತ್ರಾಣ ಪ್ರಾಣ ನಾ ಬಿದ್ದೆ ಬುದ್ಧಿಗೇಡಿ ॥
ನಿನ್ನ ಚಣವ ಬಿಟ್ಟು. ಬನ್ನಬಟ್ಟದ್ದು ಎನ್ನ ತಪ್ಪು
ಕಂದನೆಂದು ದಯೆಸಿಂಧು ಇಂದು ನೀನಪ್ಪಿಕೊಳ್ಳೆ ಒಪ್ಪು ॥

ಗಂಗಾಲಹರಿಯಲ್ಲಿ ಜಗನ್ನಾಥ ಗಂಗಾಮಾತೆಯ ಸುಧಾ ಸೌಂದರ್ಯವನ್ನು ಅವಳ ಅಪಾರ ಕರುಣೆಯನ್ನೂ ಮಾತೃ ವಾತ್ಸಲ್ಯವನ್ನು ಹೊಗಳುತ್ತಲೇ ತನ್ನ ನೋವನ್ನೂ ತೋಡಿಕೊಂಡಿದ್ದಾನೆ. ಈ ಕಾವ್ಯದಲ್ಲಿ ಸ್ತೋತ್ರದ ಗಾಂಭೀರ್ಯದೊಡನೆ ಆತ್ಮನಿವೇದನೆಯ ಆರ್ತತೆಯೂ ಸೇರಿ ಅದಕ್ಕೆ ಸಂಕೀರ್ಣತೆಯನ್ನು ತಂದುಕೊಟ್ಟಿದೆ.

ಗಂಗಾಲಹರಿ ಪ್ರಕಟವಾಗಿ ಅರ್ಧಶತಕವೇ ಕಳೆದು ಹೋಗಿದ್ದರೂ ಅದರ ಮರುಪ್ರಕಟನೆಯಾಗದೇ ಹೋದದ್ದು ವಿಷಾದದ ಸಂಗತಿ- ಈಗಲಾದರೂ ಅದು ಸಾಧ್ಯವಾಗಿದ್ದುದರಿಂದ ಓದುಗರು ಅದನ್ನು ಸ್ವಾಗತಿಸುವರು ಎಂದು ನನ್ನ ಹಾರೈಕೆ. ಜಗನ್ನಾಥನಂಥ ಕವಿಗಳಾಗಲಿ, ಆಚಾರ್ಯರಂಥ ಪಂಡಿತರಾಗಲಿ ಅಲಕ್ಷ್ಯಕ್ಕೆ ಒಳಗಾಗುವುದು ನಾಡಿನ ಸಂಸ್ಕೃತಿಯ ಲಕ್ಷಣವಲ್ಲ.

ಧಾರವಾಡ
ಜನವರಿ 9, 2013, **ಜಿ. ಎಸ್. ಆಮೂರ**

# ಮಧು-ಮಧುರ ಗೇಯ ಪ್ರಬಂಧ

ಪಂಡಿತ ಜಗನ್ನಾಥ ಕವಿರಾಜನ ಗಂಗಾಲಹರಿ, ಸಂಸ್ಕೃತ ವಾಙ್ಮಯದಲ್ಲಿ ಸಹೃದಯರೆಲ್ಲರನ್ನೂ ತಲೆದೂಗಿಸುವ ಕೃತಿಯಾಗಿದೆ. ಶಿಖರಿಣೀ ಎಂಬ ಹೆಸರಿನ ಅಕ್ಷರವೃತ್ತದಲ್ಲಿದ್ದರೂ, ಕವಿಯ ಬಂಧ ವೈಶಿಷ್ಟ್ಯದ ಮೂಲಕ, ಅದೊಂದು ಮಧು-ಮಧುರವಾದ ಗೇಯ ಪ್ರಬಂಧವೆನಿಸುವಂತಿದೆ. ಅಲ್ಲದೆ ಅದರಲ್ಲಿ ತುಂಬಿ ಸೂಸುತ್ತಿರುವ ಗಂಗಾಮಾತೆಯ ವಿಷಯಕವಾದ ಆರ್ತ ಭಕ್ತಿ-ಭಾವವು ಕೃತಿಯ ಗೇಯ ಗುಣವನ್ನು ಹೆಚ್ಚು ಪರಿಪುಷ್ಟಗೊಳಿಸಿದೆ. ಇಂತಹ ಸುಂದರ ಕೃತಿಯನ್ನು ಕನ್ನಡಿಗರಿಗಾಗಿ ಕನ್ನಡ ಭಾಷೆಯಲ್ಲಿಯೇ ಒದಗಿಸಿಕೊಟ್ಟು, ಶ್ರೀಮಾನ್ ಪಂ. ಗಲಗಲಿ ಪಂಢರಿನಾಥಾಚಾರ್ಯರು ತುಂಬ ಉಪಕಾರವನ್ನು ಮಾಡಿದ್ದಾರೆ.

ಮೂಲವನ್ನು ಅನುವಾದಗೊಂಡ ಕನ್ನಡ ಪದ್ಯಗಳು ಸಮವೃತ್ತವಲ್ಲವಾದರೂ, ಕೃತಿಯ ಗೇಯಗುಣಕ್ಕೆ-ಭಾವಾವತಾರಕ್ಕೆ-ತಕ್ಕುವೆನಿಸುವ ದೇಸಿ ಛಂದೋಬಂಧಗಳಾಗಿವೆ. ಪದ್ಯಗಳ ತುಂಬ ಹೆಣಿಕೆಗೊಂಡಿರುವ ಪ್ರಾಸಾನುಪ್ರಾಸನಗಳು, ಓದುವವರ ಕಿವಿ-ಮನಗಳನ್ನು ಸೆರೆಹಿಡಿಯಬಲ್ಲವು. ಅನುವಾದಕ್ಕಾಗಿ ಬಳಸಿದ ಭಾಷೆ ಹಾಡಿಕೊಳ್ಳಲಿಕ್ಕೆ ಬರುವಂತಹ ಜಾನಪದ ಪದಪ್ರಯೋಗಗಳಿಂದ ಕೂಡಿ ಸುಲಭತೆಗೆ ಸಹಾಯಕವೆನಿಸುವಂತಿದೆ.

ಪಂಡಿತ ಪಂಢರಿನಾಥಾಚಾರ್ಯರು ಸಂಸ್ಕೃತ ಸಾಹಿತ್ಯ ಸುಧಾಸಾಗರದಲ್ಲಿ ಮನವಾರೆ ಈಜಾಡಿದವರು. ಆ ಭಾಷೆಯ ಕಾವ್ಯ-ಕೃತಿಗಳ ಸೌಂದರ್ಯದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಚೆನ್ನಾಗಿ ಅರಿತುಕೊಂಡವರು. ಇಂಥವರು ಜಗನ್ನಾಥ ಕವಿರಾಜನ ಕೃತಿಮಾಧುರ್ಯವನ್ನು ಕನ್ನಡದಲ್ಲಿ ಇಳುಹಿದುದು ರಸಿಕರಿಗೆಲ್ಲ ತುಂಬ ಸಂತೋಷದ ಸಂಗತಿ.

ಧಾರವಾಡ

20-11-1957

ಬೆಟಗೇರಿ ಕೃಷ್ಣಶರ್ಮ

# ಅಲಖ್ ನಿರಂಜನ್

(ಕಥಾಸಾರಾಂಶ)

ಉತ್ತರಭಾರತದಲ್ಲಿನ ಗೋರಖ್‌ಪುರ ಸಂಪ್ರದಾಯದ ಓರ್ವ ಭಿಕ್ಷುಕನಿಗೆ ಭಿಕ್ಷೆ ನೀಡಲು ಬಂದ ಹದಿಹರೆಯದ ಶ್ರೀಮಂತ ಹೆಣ್ಣು. ಭಿಕ್ಷುಕನ ಮುಖದ ಮೇಲಿನ ವರ್ಚಸ್ಸು, ಕಣ್ಣುಗಳ ಕಾಂತಿಗೆ ಮರುಳಾಗಿ ಅವನಲ್ಲಿ ತನ್ನ ಬಯಕೆಯನ್ನು ಸೂಚ್ಯವಾಗಿ ಮುಂದಿರಿಸುತ್ತಾಳೆ. ಓರ್ವ ಗರತಿಯ ಗೌರವವನ್ನು ಮಣ್ಣುಗೂಡಿಸಿದ ಚರ್ಮದ ಚಕ್ಷುಸ್ಸನ್ನು ಕಿತ್ತು ತನ್ನ ಭಿಕ್ಷಾಪಾತ್ರೆಯಲ್ಲಿ ಅವಳ ಮುಂದೆ ಹಿಡಿದು ಅವಳ ಒಳಗಣ್ಣು ತೆರೆಯಿಸಿ **'ಅಲಖ್‌ನಿರಂಜನ್'** ಎಂದು ಸರ್ವಶಕ್ತನನ್ನು ಧೇನಿಸುತ್ತ ಅಲ್ಲಿಂದ ತೆರಳಿಬಿಡುತ್ತಾನೆ ಆ ಜೋಗಿ.

# ಅಲಖ್ ನಿರಂಜನ

## (ದೃಷ್ಟಿದಾನ)

### ಎಸಳು

ಅಲಖ್ ನಿರಂಜನ ಝಿಲ್ ಝಿಳ್ ಗುಂಜನ
ಭವ-ಭಯ-ಭಂಜನ ಬೈರಾಗಿ,
ದಡದಡ ಬಂದನು, ದ್ವಾರದಿ ನಿಂದನು
ಭಿಕ್ಷೆಯು ಎಂದನು ಆ ಜೋಗಿ ||೧||

ಕಾಮನೆ ಕಾವಿಯನುಟ್ಟನೊ, ತೊಟ್ಟನೊ
ಸೋಮನೆ ಶಾಟಿಯ ಕಾಪಾಲಿ !
ಕಾವ್ಯವೆ ಕಾಯವ ಪಡೆದಿತೋ ಪಿಡಿದಿತೋ
ರಸ ಋಷಿ ಕರವೇ ಜಪಮಾಲಿ ! ||೨||

ಚಂದನ ಚರ್ಜಿತ, ಭಸ್ಮೋದ್ಧ್ವರ್ಜಿತ
ಬಂಧುರ ಸುಂದರ ಸನ್ಯಾಸಿ,
ರಾಗ-ಭೋಗ-ವಿಷ-ವಿಷಯಗಳೆದೆಯನು
ಮೆಟ್ಟುವವೋಲ್ ಪದ ವಿನ್ಯಾಸಿ ||೩||

ಚಂಡಮರೀಚಿಯೆ ದಂಡ ಕಮಂಡಲು
ತಾಪಸ ವೇಷವ ತಳೆದಿಹನೆ !
ಸಂಧ್ಯಾರಾಗದ ಚಂದನ ತಂಪಿಗೆ
ವೈಶ್ವಾನರ ತಪಕಿಳಿದಿಹನೆ ! ||೪||

ತರುಣಾಽ ರುಣ-ರುಚಿ-ರಂಜಿತ ರೂಪವು
ಗರತಿಯ ಗೌರವ ಕೆಣಕಿತ್ತು,
ಸಂಯಮ-ಮುದ್ರಿತ-ಹೃದಯ ಕವಾಟದಿ
ಕಾಮನ ಕಾರ್ಮುಕ ಮಣಿದಿತ್ತು ||೫||

ವರ ವೈರಾಗ್ಯದ ಚಿರ ಸೌಭಾಗ್ಯಕೆ
ಶೃಂಗಾರವೇ ಶರಣಾಗಿತ್ತು,
ಬ್ರಹ್ಮಜ್ಞಾನದ ಫಲ -ಪರಿಪಾಕಕೆ
ತಾರುಣ್ಯವೇ ತಲೆ ಬಾಗಿತ್ತು. ||೬||

ಭಾಗ -೨

'ಅಲಖ್ ನಿರಂಜನ ಅಲಖ್ ನಿರಂಜನ'
ಮಂಜುಳ ಗುಂಜನ ಗುಣಗಿತ್ತು
ಬಾಲ ಕುತೂಹಲ ಕೆರಳಿಸಿ ಗಣ ಗಣ
ಘಂಟಾ -ಕಿಂಕಿಣಿ ಕುಣಿದಿತ್ತು ||೭||

ಬಾಗಿಲು ತೆರೆಯಿತು, ಮುಂತೆರೆ ಸರಿಯಿತು
ಜವನಿಕೆ ಜರೆಯಿತು ಮರೆಯಲ್ಲಿ
ಪವನವು ಪುಳಕಿತು, ಬಳ್ಳಿಯು ಬಳುಕಿತು
ತರುಲತೆ ತುಳುಕಿತು ತೆರೆಯಲ್ಲಿ ||೮||

ಉರ್ವಿಯ ಊರ್ವಶಿ, ರಂಜಿಪ ರೂಪಸಿ
ರಾಗ ಪರಾಗವು ಪರಿಮಳಿಸಿ,
ಬಂದಳು ಷೋಡಶಿ, ರಸ-ಸರ-ಸಾರಸಿ
ಒಡೆಯನ ಪ್ರೇಯಸಿ ನಳ ನಳಿಸಿ ||೯||

ಮೃದು -ಮಂದಸ್ಮಿತ ಆನನ-ಕಾನನ
-ಕೆರೆ-ಕೆಂದಾವರೆ ಅರಳಿತ್ತು,
ಉಸುರಿನ ಗಂಧಕೆ ಮುಖ ಮಕರಂದಕೆ
ಬಂಡುಣಿ ದಂಡದು ತೆರಳಿತ್ತು ||೧೦||

ಕರಿ ಹೊರೆ ಕೇಶಕಲಾಪದ ಕಂಪಿಗೆ
ಸಂಪಿಗೆ ಸೊಂಪನು ಸುರಿದಿತ್ತು
ನೀಲಿಮ-ಕುಂತಲ -ನಿಕಷದಿ ಬೈತಲು
ಬಂಗಾರದ ಗೆರೆ ಕೊರೆದಿತ್ತು ||೧೧||

ಹೆಜ್ಜೆಯ ರಿಂಗಣ ಕಜ್ಜಕೆ ಗೆಜ್ಜೆಯ
ಹಂಸವೆ ತಾಳವ ಹಿಡಿದಿತ್ತು,
ಮುಗುದೆಯ ಮೈಸಿರಿ ನವಿಲಿನ ನಾಟ್ಯಕೆ
ಕಾಮನ ಕೊಳಲದು ನುಡಿದಿತ್ತು. ||೧೨||

"ಗರತಿಯು ಗುರುತಿಲ್ಲದ ಪರ ಗುರುವಿಗೆ ಬಿಕ್ಕೆಯ
-ನಿಕ್ಕಳು" ಎಂದಂದು
ಆಳಿನ ಕೈಯಲಿ ಕಾಳನು ಕಳುಹಿಸಿ
ಜೋಗಿಯ ಜೋಳಿಗೆ ತುಂಬೆಂದು ||೧೩||

ಜೋಗಿಯು ನಯನದ ನವ-ನೀಲಾಂಜನ
-ನಂದಾದೀಪವನೆತ್ತಿದನು,
ಕಣ್ಣಿನ ಕಾಂತಿಯ ಹೊಳಪಿಗೆ ಕಾಮನು
ಪ್ರೇಮದ ಗುಂಡಿಯನೊತ್ತಿದನು ||೧೪||

ಎದೆ 'ಝಲ್' ಎಂದಿತು, ಮೈ 'ಜುಂ' ಎಂದಿತು
ಸಂಯಮ ಪಾಶವು ಸಡಿಲಿತ್ತು,
ಕಂಗಳ ಮಂಗಳ ಕಾಂತಿಯ ಶಾಂತಿಯ
ಕಡಲಿನ ಒಡಲಲಿ ಸಿಡಿಲಿತ್ತು ||೧೫||

ನಾಚಿಕೆ ನಲ್ಲೆಯ ಗಲ್ಲ ಗುಲಾಬಿಗೆ
ಮೆಲ್ಲನೆ ಗುಲ್ಲನು ಕೊಟ್ಟಿತ್ತು,
ಸಂಜೆಯ ಛವಿ, ಗುಲಗಂಜಿಯ ರುಚಿ, ಮುಖ
ಕುಂಕುಮ ಕರಡಿಗೆಯಾಗಿತ್ತು ||೧೬||

ಎದೆ ಕಾರಂಜಿಯು ರಾಗದ ರಸವನು
ಕಣ್ಣಿನ ಕೆಂಪಿಗೆ ತೂರಿತ್ತು,
ನಿಗ್ರಹ-ಪಂಜರ -ಬದ್ಧ-ವಿಹಂಗಮ
ಆಗಸದಂಗಳಕ್ಹಾರಿತ್ತು ||೧೭||

ಹೃದಯವು ಅದುರಿತು, ಧೈರ್ಯವು ಚದುರಿತು
ಕೆದರಿತು ನೆಲವನು ಕೆಂಗಣ್ಣು,
ಹಮ್ಮಿನ ಹೆಮ್ಮರ ಉರುಳಿತು, ನರಳಿತು
ಚಿತ್ತದ ಚಂಚಲಕಾಜ ಹೆಣ್ಣು ||೧೮||

'ಅಲಖ್ ನಿರಂಜನ ಘಿಲ್ ಘಿಲ್ ಗುಂಜನ್
ಮುಂದಕೆ ಸಾಗಿದನಾಽ ಜೋಗಿ,
ಹೃದಯದ ಗುಡಿಯಲಿ ಮದನನ ಗಂಟೆಯ
ಢಣಢಣ ಬಾರಿಸಿ ತಿರುತಿರುಗಿ ||೧೯||

ಮನೆಯಲಿ ಯೋಚಿಸಿ, ಮನದಿ ವಿವೇಚಿಸಿ
ತನ್ನಲಿ ತಾನೇ ನಾಚಿದಳು
ಹಿಂದಿನ ಸತಿಯರ ಸುಂದರ ಗುಣಗಳ-
-ಗಾನದಿ ಎದೆ ಮರೆ ಮಾಚಿದಳು ||೨೦||

ಜೋಗಿಯ ಬೈದಳು, ಯೌವನ ಜರಿದಳು'
ಜಾರಿದ ಹೃದಯವ ಹೀಗಳೆದು,
"ಕಾಮನ ಕುಟ್ಟುವೆ, ಪ್ರೇಮವ ಮೆಟ್ಟುವೆ"
ಎಂದಳು ಹಟದಿಂದೆದೆ ತುಳಿದು ||೨೧||
"ನಾಳೆಗೆ ಜೋಗಿಯು ಬಂದರೆ, ನಿಂದರೆ
ನನ್ ದೊರೆಯಾಣೆಗೂ ನಾ ಕಾಣೆ,
ಆಳಿನ ಕೈಯಲಿ ಕಾಳನು ಕಳುಹಿಸಿ
ನುಗಿಸುವನಾಚೆಗೆ ನಾ ಜಾಣೆ" ||೨೨||

### ಭಾಗ -೪

'ಅಲಖ್ ನಿರಂಜನ ಅಲಖ್ ನಿರಂಜನ'
ಕಂಚಿನ ಕಂಠವು ಮೊಳಗಿತ್ತು
ಹೆಣ್ಣಿನ ಕಣ್ಣಿಗೆ ಹಬ್ಬವ ಹಬ್ಬಿಸಿ
ಮಿಂಚಿನ ಮೂರುತಿ ಬೆಳಗಿತ್ತು ||೨೩||

ಶಪಥವು ಮರೆಯಿತು, ಕುಪಥವು ತೆರೆಯಿತು
ಕರೆಯಿತು ಕಿಂಕಿಣಿ ಝೇಂಕಾರ,
ಕರಣವ ಎಳೆಯಿತು, ಹರಣವ ಸೆಳೆಯಿತು
ಹೂಂಕರಿಸುವ ಸ್ಮರ ಟಂಕಾರ ||೨೪||

ನಿಲ್ಲದ ಮೇಲುದ ಮೆಲ್ಲನೆ ತೀಡುತ
ಸಂದಳು ಪ್ರಣಯದ ರಂಗೇರಿ,
ಕರದಲಿ ಕಾಳಿನ ಮೊರವನು ಮೆರೆಯಿಸಿ
ಹೊಸ ಹೊಂಗನಸಿನ ಸಿಂಗಾರಿ ||೨೫||

ಜೋಗಿಯ ಜೋಳಿಗೆ ಜಾರನ ಜಾಳಿಗೆ
ತೆರದಲಿ ನೀರೆಗೆ ತೋರಿತ್ತು
ಅವನೆದೆ ಬರವನು ಹಿಂಗಿಸಿ ತೆರವನು
ತುಂಬಲು ಎದೆ ರಸ ತೊರೆದಿತ್ತು ||೨೬||

ತನ್ನೆದೆ ಹಾಕಿದ ತೆರದಲಿ ಜೋಳಿಗೆ
ತಳದಲಿ ಧಾನ್ಯವು ಬಿದ್ದಿತ್ತು,
ಸತಿಯ ವಿವೇಕವು ಬದುಕಲು ಹಚ್ಚಿದ
ಕಂಟಕದೋಲ್ ನವಿರೆದ್ದಿತ್ತು ||೨೭||

ಜೋಗಿಯ ವದನದ ತಬಕದಿ ಬೆಳಗುವ
ಕಣ್ಮಣಿ ಆರತಿ ಬೆಳಗಿತ್ತು,
"ತ್ವಂ ಸೌಭಾಗ್ಯವತೀ ಭವ !! "ಆಶಿಷ"
ಕಂಠಾಕಾಶದಿ ಮೊಳಗಿತ್ತು ||೨೮||

ಕಾಮನು ತರಳೆಯ ಕರುಳಿನ ಬೆರಳಿಗೆ
ಕೊರಳಿನ ಮುರಳಿಯ ನುಡಿಸಿದನು,
ಭಾವದ ಕಾವಿಗೆ ಕರಗಿದ ಚಿದ್ರಸ
ಕಕ್ಷರ ಕವಚವ ತೊಡಿಸಿದನು ||೨೯||

"ನಿಲ್ಲೆಲೆ ಜೋಗಿಯೆ, ನಿನ್ನಯ ಕಣ್ಣಲಿ
ಎಂತಹ ಕಾಂತಿಯು ಕುಣಿಯುತಿದೆ,
ತೇಜಃ ಪುಂಜದ ಕಾಂತಿವಿಲಾಸಕೆ
ರವಿ-ಶಶಿ-ನೈದಿಲೆ ಮಣಿಯುತಿವೆ" ||೩೦||

"ಏನಿದು ಜ್ಯೋತಿಯು ! ಚೆಲುವಿನ ಚಿಲುಮೆಯ
ಚಿಮ್ಮಿಸಿ ಚಾಕ್ಷುಷ ಕುಕ್ಕಿಸಿದೆ
ಕಂಜ ನಿಕುಂಜದ ಸಾರವ ಹೀರಿದೆ ಜೊನ್ನಿನ
ಚೇಂಗಡಲುಕ್ಕಿಸಿದೆ ||೩೧||

"ಚೆಲುವಿಕೆ ಚಂಚಲತೆಗೆ ಕಣಕಟ್ಟಿದೆ
ಮಿಂಚಿನ ಹೊಳೆ ಮಡುಗಟ್ಟಿಹುದು
ವಿಧಿ ನಿನ್ನೋಟದ ತಟ್ಟೆಯಲೆಂತಹ
ದೀಪದ ಕುಡಿಗಳನಿಟ್ಟಿಹುದು !" ||೩೨||

ಜೋಗಿಯು ಬೆಚ್ಚಿದ, ಕಣ್ ಕಿವಿ ಮುಚ್ಚಿದ
ಹೆಣ್ಣಿನ ಮೆಚ್ಚಿಗೆ ಹುಚ್ಚಾದ
ಹದಿಬದೆ ಧರ್ಮದ ಬಳ್ಳಿಗೆ ಕೊಳ್ಳಿಯ
ಹಚ್ಚುವ ಕಾನನ ಕಿಚ್ಚಾದ ||೩೩||

## ಭಾಗ -೫

'ಅಲಖ್ ನಿರಂಜನ, ಅಲಖ್ ನಿರಂಜನ'
ಮರುದಿನ ಬಂದನು ಆ ಜೋಗಿ
ಉಕ್ಕಿನ ಬಾಗಿಲು ಗಕ್ಕನೆ ತೆರೆಯಿತು
ತವಕದಿ ಬಂದಳು ಅನುರಾಗಿ ||೩೪||

ಜೋಗಿಯನಿಬ್ಬರು ಜೊತೆಗಾರರು ತೋಳ್
ಪಿಡಿದೇ ನಡೆಸುತ ತರುತಿಹರು
ಕಣ್ಣಿನ ಕಲಶವ ಮಣ್ಣಿಗೆ ಬಗ್ಗಿಸಿ
ಬಾಷ್ಪ ಸ್ನಾನವ ನಡೆಸಿಹರು ||೩೫||

ಹಲ್ಲಣ ಹಾರಿತು, ತಲ್ಲಣಿಸಿತು ಎದೆ
ನಿಲ್ಲದೆ ತೊಳಲಿದಳಾಽ ನಾರಿ
'ಜೋಗಿಯೇಽ ನಿನಗೇನಾಗಿದೆ" ಎಂದಳು
ಬಂದಳು ನಿಂದಳು ಬಳಿ ಸಾರಿ ||೩೬||

"ತಾಯಿಯೆ, ತೆಗೆದುಕೋ'ಎನ್ನುತ ಜೋಗಿಯು
ನೀರೆಗೆ ಥಾಲಿಯ ಕೊಟ್ಟಿದ್ದ
ಥಾಲಿಯ ತಳದಲಿ ಥಳ ಥಳ ಹೊಳೆಯುವ
ಕಣ್ಣುಗಳೆರಡನು ಇಟ್ಟಿದ್ದ ||೩೭||

ತಾಯಿಯೆ ನಿನ್ನೆಯ ದಿನ ನೀನೆನ್ನಯ
ಕಣ್ಣಿನ ಬಣ್ಣನೆ ಮಾಡಿದ್ದಿ
ಗರತಿಯ ಗೋರಿಯ ಕಟ್ಟಿದ ತೊಗಲಿನ
ಆ ಕಣ್ ಕಿತ್ತಿದೋ ತಂದಿಹೆನು ||೩೮||

"ಅಲಖ್ ನಿರಂಜನ, ಅಲಖ್ ನಿರಂಜನ"
ನಡೆದನು  ನಿರ್ವ್ಯಥೆಯಾಽಜೋಗಿ
ತೊಗಲಿನ ಕಣ್ ಬಲಿಯಿಂದಲಿ, ಜ್ಞಾನದ
ಒಳಗಣ್ ತೆರೆಯಿಸಿ ಕುರುಡಾಗಿ ||೩೯||

ಅಲಖ್‌ನಿರಂಜನ್

# ಗುರು ಸ್ತವನ

ಕೃಷ್ಣತಟದಿ ಗಲಗಲಿಯಪುರದಿ
ಮೆರೆದಿಹರು ಸುಜನರೆಲ್ಲ

ಕಾವ್ಯ ಶಾಸ್ತ್ರ ವೇದಾಂತ ಬಲ್ಲ
ಧೀಮಂತ ಕವಿಗಳೆಲ್ಲ

ಲಹರಿಯಿಂದ ಜಗನ್ನಾಥ ಪಂಢರೀ
ನಾಥ ಕವಿಯೆ ಬಂದ
ಗಂಗೆಲಹರಿ ಕನ್ನಡಕೆ ತಂದ
ಅಂದತ್ತ ಅಂದಾ ಅಂದ
(ಅಂದತ್ತ ಅಂಬಿಕಾತನಯದತ್ತ)

ಹೃದ್ಯಗದ್ಯ ಆಸ್ವಾದ್ಯ ಪದ್ಯ
ಅನವದ್ಯ ಎಲ್ಲ ನವ್ಯ
ಪ್ರಾಸದುದ್ದ ಆಡಿದ್ದ ಮಾತು
ಬರೆದಿದ್ದೆ ಚಂಪುಕಾವ್ಯ

ಬರಹ ಸರಸ ಭಾಷಣವು ಸುರಸ
ಪ್ರಾಸಾನುಪ್ರಾಸ ಭರಿತ,
ಚಾಟುಹಾಸ ಕವಿತಾ ವಿಲಾಸ
ನವರಸದ ದಿವ್ಯ ಸ್ರೋತ

ಬುದ್ಧಿಭಾವಗಳ ಮಿಂಚು ಹರಡಿ
ಮಾತೆಲ್ಲ ಜ್ಞಾನಹವನ
ಕವನಸ್ತವನ ರಸಿಕರಿಗೆ ದವನ
ಮಕರಂದ ಮಿಲಿತ ಪವನ

ಅಮರವಾಣಿ ಕನ್ನಡದ ಜಾಣೆ
ಕುಣಿದಿಹಳು ಜಿಹ್ವೆಯೊಳಗೆ
ಬೊಮ್ಮನರಸಿ ಬೇಸರಿಸಿ ಆಸೆ
ತೊರೆದಿಹಳು ವೀಣೆಯೊಳಗೆ

ಕಂಠ ವೀಣೆ ಬರಹದಲಿ ಬಾಣ
ಪಾಂಡಿತ್ಯ ಪ್ರತಿಭೆ ಪೂರ್ಣ
ಗುರುವೆ ನಿಮ್ಮ ಪಾದಕಮಲದುಂಬಿ
ನಾ ಸವಿದೆ ಜ್ಞಾನಜೇನ

ಯತ್ಕಂಠಃ ಸ್ವರಬದ್ಧಪದ್ಯ ಪಠನೇ ಸುಶ್ರಾವ್ಯ ವೀಣಾಯಿತಃ
ಪ್ರಾಸೋಲ್ಲಾಸಿ ವಚೋವಿಲಾಸರಚನೇ ಮಹಾ ವಾಣ್ಯಾಚಬಾಣಾಯಿತಃ
ಶ್ರೀ ಮನ್ಮಧ್ವಸುಶಾಸ್ತ್ರ ಕಾಂಚನ ಮಹಾಶಾಣಾಯಿತಾ ಯನ್ಮತಿಃ
ವಂದೇ ಪಂಢರೀನಾಥ ನಾಮಕಗುರುಂ ದದ್ಯಾತ್ಸವಿದ್ಯಾಂಮಮ ॥

ಡಾ॥ ವೆಂಕಟನರಸಿಂಹಾಚಾರ್ಯ
ಗುಡೇಬಲ್ಲೂರು

# ಕೊನೆ ಮಾತು...

ಗಂಗಾಲಹರಿ, ಅಲಖ್ ನಿರಂಜನ್, ಭಾಮತಿ, ವಿದ್ಯಾರಣ್ಯರು ಇವೆಲ್ಲವೂ ಕಟ್ಟುಕಥೆಗಳಾಗಿರಬಹುದೇ? ಇರಬಹುದು.

ಅಥವಾ ನಡೆದ ಸಣ್ಣ ಘಟನೆಗೆ ಕಾಲಸರಿದಂತೆ ಕಲ್ಪನೆಗಳು ಸೇರಿಕೊಂಡಿರಲೂಬಹುದು. ಇಷ್ಟಂತೂ ಸತ್ಯ. ಕಥಾನಕಗಳು ಹೃದ್ಯವಾಗಿವೆ. ಅಭಿವ್ಯಕ್ತ ಸಂದೇಶ ಮೌಲಿಕವಾಗಿದೆ. ಗಂಗೆಯಲ್ಲಿನ ಮಾತೃಭಕ್ತಿ, ಅಲಖ್‌ನಿರಂಜನ್‌ನ ಜೋಗಿಯ ನಿಷ್ಠುರ ನಿರ್ಲಿಪ್ತ ಭಾವ, ಭಾಮತಿಯ ಸಮರ್ಪಣೆ, ವಿದ್ಯಾರಣ್ಯವಲ್ಲಿನ ವಿದ್ಯಾಪಕ್ಷಪಾತ, ಸಾಧನಾ ದೀಕ್ಷೆ ಮುಂತಾದ ಗುಣಗಳು ಓದುಗರಿಗೆ ವಿಭಿನ್ನ ರಸದೂಟವನ್ನು ಒದಗಿಸುತ್ತವೆ. ಕವಿಯ ಮನಸ್ಸಿಗೆ ಇಂಥ ರಮ್ಯ ಕಥಾನಕಗಳನ್ನು ಪದ್ಯದ ಹದಕ್ಕೆ ಹವಣುಗೊಳಿಸಬೇಕೆಂದು ತೋರಿತೇನೋ. ಪದ್ಯ ರಚನೆಗೆ ಆಯ್ದುಕೊಂಡ ವಸ್ತು ಐತಿಹಾಸಿಕ ವಸ್ತುನಿಷ್ಠ ಸಂಗತಿಯೇ ಆಗಿರಬೇಕೆಂದಿಲ್ಲವಲ್ಲ!

ಸುಮಾರು 50 ವರ್ಷಗಳ ಹಿಂದೆ ರಚಿತವಾಗಿದ್ದ ಗಂಗಾಲಹರಿ, ಅಲಖ್‌ನಿರಂಜನ್ ಓದುಗರ ಅಪೇಕ್ಷೆಯ ಮೇರೆಗೆ ಪುನರ್ಮುದ್ರಣಗೊಳ್ಳುತ್ತಿವೆ. ನನಗೆ ತಿಳಿದಂತೆ ಆಚಾರ್ಯರು ತಮ್ಮ 86ನೇಯ ಇಳಿವಯಸ್ಸಿನಲ್ಲಿ ಭಾಮತಿ, ವಿದ್ಯಾರಣ್ಯ ರಚಿಸಿದರು. ಮತ್ತೊಮ್ಮೆ ಈ ಪದ್ಯಗಳನ್ನು ಅವಲೋಕಿಸಿದ ಬಳಿಕವೇ ಅಚ್ಚಿನ ಮನೆಗೆ ಕೊಡುವದೆಂದು ಹೇಳುತ್ತಿದ್ದರು. ಅಷ್ಟರಲ್ಲಿ ಅನಾರೋಗ್ಯದಿಂದ ಹಾಸಿಗೆ ಹಿಡಿದು ತಮ್ಮ ಬರಹಗಳನ್ನು ಗುರುತಿಸಲಾಗದ ಸ್ಥಿತಿ ತಲುಪಿದರು. ಇತ್ತೀಚೆ ಅವರ ಆರೋಗ್ಯ ಕೊಂಚ ಸುಧಾರಿಸಿದರೂ ಬರೆದುದನ್ನು ಎಡಿಟ್ ಮಾಡಲಾರರು. ಈಗ ಅವರಿಗೆ ವಯಸ್ಸು 94. ಅವರು ಬದುಕಿದ್ದಾಗಲೇ ಈ ರಚನೆಗಳು ಪ್ರಕಾಶಿತಗೊಂಡರೆ ಅದರಿಂದ ಅವರಿಗೆ ಮಾನಸಿಕ ಉತ್ಸಾಹ ದೊರೆತೀತು ಎಂಬ ಆಸೆಯಿಂದ ನಮ್ಮ ತಿಳುವಳಿಕೆಯ ಮಿತಿಯಲ್ಲಿ ಎಡಿಟಿಂಗ್-ಪ್ರೂಫ್ ರೀಡಿಂಗ್ ಪೂರೈಸಿ ಅವಸರದಿಂದ ಪ್ರಿಂಟಿಗೆ ಕೊಡಲಾಗಿದೆ.

ಸಹೃದಯವಾಚಕರು ಹಂಸಕ್ಷೀರ ನ್ಯಾಯದಂತೆ ಇದರಲ್ಲಿನ ಗುಣಗಳನ್ನು ಗ್ರಹಿಸಿ ದೋಷಗಳನ್ನು ಕ್ಷಮಿಸುವಿರೆಂದು ಆಶಿಸುವೆ.

ಇತಿ ಸಜ್ಜನ ಸೇವಕ, ಗೋಪೀಜನಪ್ರಿಯ.

ಶ್ರೀ ಪಂಢರಿನಾಥಾಚಾರ್ಯರ ಕನ್ನಡ ಗಂಗಾಲಹರಿ ಒಂದು ಒಳ್ಳೆಯ ಕಾವ್ಯಕೃತಿ, ಆಚಾರ್ಯರು ಸಂಸ್ಕೃತ ಕಾವ್ಯವನ್ನು ಮುಕ್ತಕಂಠವಾಗಿ ಮಧುರವಾಗಿ ಹೇಳಬಲ್ಲರು. ಆ ಮಾಧುರ್ಯ ಈ ಅನುವಾದದಲ್ಲೂ ನೆಲಸಿದೆ. ಅಲಖ್ ನಿರಂಜನ ಎಂಬ ಇವರ ಕವಿತೆ ಇಂದಿನ ನಮ್ಮ ಉತ್ತಮ ಕಥನ ಕವನಗಳಲ್ಲೊಂದೆಂದು ಪರಿಗಣಿಸಬಹುದು. ಕವಿಯನ್ನು ಕುರಿತು ಇವರು ಬರೆದ ಪರಿಚಯ ಗಂಗಾಲಹರಿಗೆ ಒಳ್ಳೆಯ ಪೂರ್ವ ಪೀಠಿಕೆಯಾಗಿದೆ. ಈ ಕೃತಿಯನ್ನು ನಾನು ಸಂತೋಷದಿಂದ ಸ್ವಾಗತಿಸುತ್ತೇನೆ.

ವಿ.ಕೃ. ಗೋಕಾಕ

ಗಂಗಾಲಹರಿಯಲ್ಲಿ ಜಗನ್ನಾಥ ಗಂಗಾಮಾತೆಯ ಸುಧಾ ಸೌಂದರ್ಯವನ್ನು ಅವಳ ಅಪಾರ ಕರುಣೆಯನ್ನೂ ಮಾತೃ ವಾತ್ಸಲ್ಯವನ್ನು ಹೊಗಳುತ್ತಲೇ ತನ್ನ ನೋವನ್ನೂ ತೋಡಿಕೊಂಡಿದ್ದಾನೆ. ಈ ಕಾವ್ಯದಲ್ಲಿ ಸ್ತೋತ್ರದ ಗಾಂಭೀರ್ಯದೊಡನೆ ಆತ್ಮನಿವೇದನೆಯ ಆರ್ತತೆಯೂ ಸೇರಿ ಅದಕ್ಕೆ ಸಂಕೀರ್ಣತೆಯನ್ನು ತಂದುಕೊಟ್ಟಿದೆ.

ಗಂಗಾಲಹರಿ ಪ್ರಕಟವಾಗಿ ಅರ್ಧಶತಕವೇ ಕಳೆದು ಹೋಗಿದ್ದರೂ ಅದರ ಮರುಪ್ರಕಟನೆಯಾಗದೇ ಹೋದದ್ದು ವಿಷಾದದ ಸಂಗತಿ– ಈಗಲಾದರೂ ಅದು ಸಾಧ್ಯವಾಗಿದ್ದುದರಿಂದ ಓದುಗರು ಅದನ್ನು ಸ್ವಾಗತಿಸುವರು ಎಂದು ನನ್ನ ಹಾರೈಕೆ. ಜಗನ್ನಾಥನಂಥ ಕವಿಗಳಾಗಲಿ, ಆಚಾರ್ಯರಂಥ ಪಂಡಿತರಾಗಲಿ ಅಲಕ್ಷ್ಯಕ್ಕೆ ಒಳಗಾಗುವುದು ನಾಡಿನ ಸಂಸ್ಕೃತಿಯ ಲಕ್ಷಣವಲ್ಲ.

ಜಿ. ಎಸ್. ಆಮೂರ
ಧಾರವಾಡ

# ಪಂಡಿತರಾಜ ಜಗನ್ನಾಥಕೃತ
# ಗಂಗಾಲಹರಿ



ಅನುವಾದ :

ಪಂ. ಪಂಢರೀನಾಥಾಚಾರ್ಯ ಗಲಗಲಿ